# ಗೋವಿನ ಕತೆ ಹಾಡು



ಪ್ರೊ|| ಟಿ. ಕೇಶವ ಭಟ್ಟ

# ಗೋವಿನ ಕತೆ ಹಾಡು

[ಸಂಪಾದಿತ-ಪರಿಷ್ಕೃತ-ವಿಸ್ತೃತ ಪ್ರತಿ]

**ಟಿ. ಕೇಶವ ಭಟ್ಟ**, ಎಂ.ಎ.,

ದಿ|| ಪ್ರೊ|| ಡಿ.ಎಲ್.ಎನ್.

ಮತ್ತು

ದಿ|| ತಾಳ್ತಜೆ ಗೋವಿಂದ ಭಟ್ಟ

ಅವರ ನೆನಪಿಗೆ

**ಚಿರ ಸಾಹಿತ್ಯ ಪ್ರಕಾಶನ**

GOVINA KATHE HADU- an interesting Kannada Ballada newly and critically edited by T. Keshva Bhat, M. A. and Published by Chira Sahitya Prakashana, 15th Main Road, Banashankari II Stage, Bangalore- 560070. Pages viii+56
Price Rs. 6-00

ತೃತೀಯ ಮುದ್ರಣ : 1997



ಬೆಲೆ: ರೂ. 6-00
ಆಕರ:
https://archive.org/details/govinakathehadu0000tkes/mode/2up
ಓಸಿಆರ್ ಪರಿವರ್ತನೆ: ವಿಶು [ https://vishwakoshaagaara.blogspot.com/ ]

ಮುದ್ರಕರು:
ಲಾವಣ್ಯ ಮುದ್ರಣ
ನಂ. 19, ಬನಶಂಕರಿ 1ನೇ ಹಂತ
ಬೆಂಗಳೂರು-560 050
ಫೋನ್ : 6610503

# ಅರಿಕೆ

(ಪ್ರಥಮ ಮುದ್ರಣ)

ಸುಮಾರು ಹನ್ನೆರಡು ವರ್ಷಗಳ ಹಿಂದೆ ದಕ್ಷಿಣಕನ್ನಡ ಜಿಲ್ಲೆಯ ಜನಪದ ಗೀತೆಗಳನ್ನು ಸಂಗ್ರಹಿಸುತ್ತಿದ್ದಾಗ ನನಗೆ ದೊರೆತ ಈ **ಗೋವಿನ ಕತೆ ಹಾಡು** ಬಹಳ ಮಹತ್ತ್ವವುಳ್ಳುದು. ನನ್ನ ತಂದೆ ದಿ. ತಾಳಿತ್ತಜೆ ಗೋವಿಂದ ಭಟ್ಟರು ಇದರ ಪ್ರತಿಕಾರರು. ತಾಳೆಯೋಲೆಗಳಲ್ಲಿ ಕಾಗದ ಪುಸ್ತಕಗಳಲ್ಲಿ ಅವರು ಪ್ರತಿಮಾಡಿದ ಹಾಡು, ತುಂಡುಪದ, ಯಕ್ಷಗಾನ, ಮಂತ್ರ, ಜ್ಯೌತಿಷ, ಕಾವ್ಯ-ಗ್ರಂಥಗಳಿಗೆ ಲೆಕ್ಕವಿಲ್ಲ. ಶ್ರೇಷ್ಠ ಲಿಪಿಕಾರರೆನಿಸಿದ್ದರು. ಈ ಗೋವಿನ ಕತೆ ಹಾಡನ್ನು ಹಲವು ಬಾರಿ ಪ್ರತಿಮಾಡಿದ್ದರು. ಅವನ್ನು ಇತರರಿಗೆ ನೀಡಿದ್ದರು. ನನ್ನಲ್ಲಿ ಇಂಥವನ್ನು ಸಂಗ್ರಹಿಸಿ ಬೆಳಕಿಗೆ ತರುವ ಆಸಕ್ತಿ ಮೂಡಿದಾಗ ನಮ್ಮ ಮನೆಯಲ್ಲಿ ಅವರು ಬರೆದ ಈ ಹಾಡಿನ ಪ್ರತಿ ಒಂದೂ ಉಳಿದಿದ್ದಿಲ್ಲ. ಅಲ್ಲಲ್ಲಿ ತ್ರುಟಿತವಾದ ಮತ್ತು ೧೯೧೪ರಲ್ಲಿ ಬೇರೆಯವರು ಬರೆದ, ಹಳೆಯ ಕಾಗದದ ಒಂದು ಪ್ರತಿ ನನಗೆ ಸಿಕ್ಕಿತು. ೧೯೬೧ರಲ್ಲಿ ನನ್ನ ಬಂಧುಗಳೊಬ್ಬರಲ್ಲಿ ತಂದೆಯವರ ಕೈಬರಹದ ಒಂದು ತುಂಡುಪದ ಪುಸ್ತಕ ನನಗೆ ಸಿಕ್ಕಿತು. ಅದರಲ್ಲಿ ಈ ಗೋವಿನ ಕತೆ ಹಾಡು ಇತ್ತು. ೨೨೭ ಸೊಲ್ಲುಗಳಿದ್ದ ವಿಸ್ತೃತ ಪ್ರತಿಯಿದು.

ಗೋವಿನ ಹಾಡನ್ನು ೧೯೬೦ರಲ್ಲಿ ಸಂಪಾದಿಸಿ, ಪ್ರಕಟಿಸಿದ ಪ್ರೊ|| ಡಿ. ಎಲ್. ನರಸಿಂಹಾಚಾರ್ ಅವರಿಗೆ ನಾನು ನನ್ನ ಪ್ರತಿಯನ್ನು ೧೯೬೨ರಲ್ಲಿ ತೋರಿಸಿದ್ದೆ. ಇಷ್ಟೊಂದು ವಿಸ್ತೃತವಾಗಿ, ಸಾಹಿತ್ಯ ಮೌಲ್ಯವುಳ್ಳ ಇದರ ಚೆಲುವಿಗೆ ಅವರು ಮೆಚ್ಚಿದ್ದರು. ಇದನ್ನು ಶಾಸ್ತ್ರೀಯವಾಗಿ ಸಂಪಾದಿಸಲು ನನಗೆ ಸೂಚಿಸಿದ್ದರು. ೧೯೬೭ರಲ್ಲಿ ತರಿಕೆರೆಯ ಜಾನಪದ ಸಮ್ಮೇಳನದಲ್ಲಿ ನನ್ನ ಇತರ ಜನಪದಗೀತ ಸಂಗ್ರಹದೊಡನೆ ಇವನ್ನು ನಾನು ಪ್ರದರ್ಶನಕ್ಕೆ ಇಟ್ಟಿದ್ದೆ. ಇದುವರೆಗೆ ಪ್ರಕಟಿಸಲಾಗಲಿಲ್ಲ. ಪ್ರಕಟಿಸಿದ್ದರೆ, ಒಂದೆಡೆ ಇದರ ಪ್ರತಿಕಾರರಾದ ನನ್ನ ತಂದೆಯವರು (ಅಗಲಿದುದು ೧೯೬೭ರಲ್ಲಿ), ಇನ್ನೊಂದೆಡೆ - ನನಗೆ ಗುರು ಸಮಾನರಾದ ಪ್ರೊ|| ಡಿ. ಎಲ್. ನರಸಿಂಹಾಚಾರ್ಯರು (ಅಗಲಿದುದು ಕಳೆದ ತಿಂಗಳಲ್ಲಿ) ಇದನ್ನು ಕಂಡು ಪಡಬಹುದಾದ ಆನಂದ ನಮ್ಮೆಲ್ಲರ ಆನಂದವನ್ನು ಉಕ್ಕಿಸುತ್ತಿತ್ತು.

ಇದನ್ನು ನೆನಸಿಕೊಂಡು, ಇಂದಿಗೆ ಅಂತರ್ಯಾಮಿಗಳಾದ ಆ ರಸಚೇತನರಿಬ್ಬರ ದಿವ್ಯ ಸ್ಮೃತಿಗೆ ಈ ಕೃತಿ ಮುಡಿಪಾಗಿರಲೆಂದು ಭಾವಿಸಿ, ಚಿರ ಸಾಹಿತ್ಯ ಪ್ರಕಾಶನದ ಮೂಲಕ ಇದನ್ನು

ಪ್ರಕಟಿಸುತ್ತಿದ್ದೇನೆ. ಈ ಸುಂದರ ಜಾನಪದ ಕಥನಗೀತದ ಸಾಹಿತ್ಯ ತತ್ತ್ವಗೇಯತೆಗಳ ಸೌಂದರ್ಯವು ಕಾರ್ಣಾಟಕ ಹಾಗೂ ಭಾರತೀಯ ಸಾಂಸ್ಕೃತಿಕ ಜೀವನಕ್ಕೆ ಬೆಳಕಾಗಿ ಪರಿಣಮಿಸಲೆಂದು ಆಶಿಸುತ್ತೇನೆ.

ಜೂನ್ 1971 **ಟಿ. ಕೇಶವ ಭಟ್ಟ**

## ಅರಿಕೆ

(ದ್ವಿತೀಯ ಮುದ್ರಣ)

ಮಕ್ಕಳ ಸಾಹಿತ್ಯದಲ್ಲಿ, ಜಾನಪದ ಕಥನಗೀತೆಗಳಲ್ಲಿ, ಸತ್ಯ ನೀತಿ ಪ್ರತಿಪಾದಕ ಕೃತಿಗಳಲ್ಲಿ ಶಿರೋಮಣಿಯಂತಿರುವ ಈ **ಗೋವಿನ ಕತೆ ಹಾಡು** ೧೯೭೧ರಲ್ಲಿ **ಹಾಡಿನ ಚೂಡಾಮಣಿ** ಎಂಬ ನನ್ನ ಜನಪದಗೀತ ಸಂಗ್ರಹ ಗ್ರಂಥದಲ್ಲಿ ಸಂಪಾದನ ಗುಣಮೌಲ್ಯದೊಂದಿಗೆ ಸೇರಿ ಅಚ್ಚಾಯಿತು. ಉಪಯೋಗ ದೃಷ್ಟಿಯಿಂದ ಆಗಲೇ ಇದನ್ನು ಪ್ರತ್ಯೇಕವಾದೊಂದು ಪುಸ್ತಕವಾಗಿಯೂ ಪ್ರಕಾಶಪಡಿಸಲಾಯಿತು. ಹಾಗೆ ಪ್ರಕಾಶಪಡಿಸಿದ ಇದರ ಪ್ರತಿಗಳು ಬೇಡಿಕೆಯ ಹೆಚ್ಚಳದಿಂದ ಎಂದೇ ಮುಗಿದವು. ಆದುದರಿಂದ ದ್ವಿತೀಯ ಮುದ್ರಣ ಆವಶ್ಯಕವಾಯಿತು.

ಇದನ್ನು ಬರೆದ ಕವಿಯ ಹೆಸರು, ಊರು, ಕಾಲ ನಿರ್ಧಾರವಾಗುವುದಿಲ್ಲ. ಮದ್ದೂರಿನವನಿರಬಹುದೆಂದು ಡಿ. ಎಲ್. ಎನ್. ಅವರು ಅಭಿಪ್ರಾಯವನ್ನು ಮುಂದಿಟ್ಟಿದ್ದಾರೆ. ಇದರ ಭಾಷೆಯ ದೃಷ್ಟಿಯಿಂದ, ಕೆಲವು ಪದಗಳ ವಿಶಿಷ್ಟ ಪ್ರಯೋಗಗಳ ದೃಷ್ಟಿಯಿಂದ ಇವನು ಮಧುಪುರ (ಮದೂರು- ಕಾಸರ ಗೋಡಿನ ಸಮೀಪ)ದವನು ಎನ್ನಲೂ ಎಡೆಯಿದೆ. ಸಂಸ್ಕೃತ ಮೂಲದ ಆಧಾರದಿಂದ ಹಾಗೂ ಇತರ ಮಾತೃಕೆಗಳಲ್ಲಿ ಕಾಣುವ ಆಧಾರದಿಂದ ಮಧುರಾಪುರದ ಶ್ರೀ ಕೃಷ್ಣನನ್ನೇ ಇವನು ಸ್ತುತಿಸಿರುವುದಾಗಿಯೂ ಕಂಡು ಬರುತ್ತದೆ. ಈ ವಿಷಯದಲ್ಲಿ ತೀರ್ಮಾನಕ್ಕೆ ಬರಲು ಹೆಚ್ಚಿನ ಪರಿಶೀಲನೆ ಅವಶ್ಯ.

ಈ ಗೋವಿನ ಕತೆ ಹಾಡಿನ ವಸ್ತು-ನೀತಿ-ಸಾಹಿತ್ಯ ಗುಣಗಳ ವಿಶೇಷಾಧ್ಯಯನಕ್ಕೆ ಅನುಕೂಲವಾಗಲೆಂದು ತಕ್ಕ ಪಾಠಾಂತರಗಳ ಅಡಿಟಿಪ್ಪಣಿಗಳನ್ನೂ ವಿವಿಧ ಆಕರಗ್ರಂಥಗಳ ಸೂಚಿಯನ್ನೂ ಇದರಲ್ಲಿ ಕೊಡಲಾಗಿದೆ. ಭಾರತೀಯ ಸಂಸ್ಕೃತಿಯ ತಿರುಳಾದ ಸತ್ಯ-ಅಹಿಂಸೆ-

ತ್ಯಾಗ-ಭಗವದ್ಭಕ್ತಿಗಳನ್ನೂ ಕನ್ನಡದ ಅಭಿಮಾನವನ್ನೂ ಜಾನಪದದ ಚೆಲುವನ್ನೂ ಸಾರುವ ಈ ಸಾಹಿತ್ಯವು ಜನ ಮನದಲ್ಲಿ ಕಂಠದಲ್ಲಿ ನೆಲೆನಿಂತಷ್ಟೂ ಒಳ್ಳೆಯದು.

ಈ ಪುಸ್ತಕವನ್ನು ಅಂದವಾಗಿ ಸಕಾಲದಲ್ಲಿ ಮುದ್ರಿಸಿ ಕೊಟ್ಟವರು ಶ್ರೀ ಗುರುಪ್ರಸಾದ ಪ್ರಿಂಟರ್ಸ್ ಅವರು. ಈ ಅಚ್ಚು ಕೂಟದ ಮಾಲಿಕರೂ ಉದಯ ಬರಹಗಾರರ ಸಂಘದ ಕಾವ್ಯದರ್ಶಿಗಳೂ ಆದ ಶ್ರೀ ಬಿ. ಕೃಷ್ಣ ಭಟ್ಟರಿಗೂ ಮುದ್ರಣಾಲಯದ ಕೆಲಸಗಾರರಿಗೂ ಆಭಾರಿಯಾಗಿದ್ದೇನೆ.

ಗೋಕುಲಾಷ್ಟಮಿ **ಟಿ. ಕೇಶವ ಭಟ್ಟ**

30-8-1975

# ಮುನ್ನುಡಿ

ನಮ್ಮ ನಾಡ ಎಲ್ಲ ಜನರ ಮೆಚ್ಚಿಕೆಯ ಹಾಡಿದು. ಇದರಲ್ಲಿ ಬರುವ ತತ್ತ್ವ ನಮ್ಮ ಹಿರಿಯರು ಬಾಳಿದ ಸಂಸ್ಕೃತಿನಿಷ್ಠ ಜೀವನದ ಸಾರ. ಇದರ ವಸ್ತು ಪುಣ್ಯಕೋಟಿ ಎಂಬ ದನದ ಕಥೆ. ಈ ದನದ ನಡತೆಯ ಮೂಲಕ ಪುತ್ರವಾತ್ಸಲ್ಯ, ಬಂಧುಪ್ರೇಮ, ಒಡೆಯನಲ್ಲಿ ಗೌರವಗಳಲ್ಲದೆ ಸತ್ಯನಿಷ್ಠೆ, ತ್ಯಾಗಶೀಲತೆ, ಭಕ್ತಿಯಂತಹ ಉದಾತ್ತ ಗುಣಗಳು ಪ್ರತಿಪಾದಿತವಾಗಿವೆ. ಗೋ ಮಾತೆಯ ಮಾಹಾತ್ಮ್ಯ ಇದರಲ್ಲಿದೆ. ಇದೇ ಕತೆ ಬೇರೆ ಬೇರೆ ರೂಪದಲ್ಲಿ ಕೌಲಿ ಹಾಡು, ಕೌಲೆ ಹಾಡುಗಳಾಗಿ ಜನಪದ ಗೀತೆಗಳಲ್ಲಿಯೂ ಬಂದಿದೆ. ಸಂಸ್ಕೃತ ಸಾಹಿತ್ಯದಲ್ಲಿ ಮಹಾಭಾರತ ಪದ್ಮಪುರಾಣಗಳಲ್ಲಿ ಪುಣ್ಯಚರಿತವಾಗಿ ಗೋವಿನ ಕಥೆಯಿದೆ. ಅಲ್ಲಿ ಗೋ ವ್ಯಾಘ್ರ ಸಂವಾದ ಬರುತ್ತದೆ. ಕನ್ನಡದ ಈ ಗೋವಿನ ಕತೆ ಹಾಡನ್ನು ಇಲ್ಲಿ ಸೂಕ್ತವಾಗಿ ಸಂಪಾದಿಸಿ ಕೊಡಲಾಗಿದೆ.

ಈ ಹಾಡಿನ ಗ್ರಂಥ ಸಂಸ್ಕರಣಕ್ಕಾಗಿ ಮೂರು ಪ್ರತಿಗಳನ್ನು ಬಳಸಲಾಗಿದೆ. ಅವುಗಳ ಸ್ವರೂಪ ವಿವರ ಹೀಗಿದೆ :

**ಕ. ಪ್ರತಿ** : ಇದು ೨೨೭ ಪದ್ಯಗಳಿರುವ ಸ್ವಕೀಯ ಪ್ರತಿ. ಕಾಗದದಲ್ಲಿ 1914ರಲ್ಲಿ ಬರೆದುದು ಇದರ ಲಿಪಿಕಾರರು ನನ್ನ ತೀರ್ಥರೂಪರಾದ ದಿವಂಗತ ತಾಳಿತ್ತಜೆ ಗೋವಿಂದ ಭಟ್ಟರು. ಈ ಸಂಸ್ಕರಣಕ್ಕೆ ಬಳಸಿರುವ ಮುಖ್ಯ ಪ್ರತಿ ಇದೇ. ಇದರ ವೈಶಿಷ್ಟ್ಯಗಳಿವು :-

ಈ ಪ್ರತಿಯಲ್ಲಿ ಗ. ಚ. ಪ್ರತಿಗಳಿಗೆ ಭಿನ್ನವಾದ ಪಾಠಾಂತರ ಪದ್ಯಗಳೂ ಅಧಿಕ ಪದ್ಯಗಳೂ ಇವೆ. ಇದರಿಂದ ಕಥಾವಸ್ತು ಹಾಗೂ ಪಾತ್ರಗುಣ ವಿಸ್ತಾರಗೊಂಡಿದೆ. ಗ. ಚ. ಪ್ರತಿಗಳ ಪ್ರಕಾರ ಗೊಲ್ಲನು ಹಾಲು ಕರೆವ ಮೊದಲು ಶೃಂಗಾರವಾಗುತ್ತಾನೆ. ಆದರೆ ಕ. ಪ್ರತಿಯಂತೆ ಅವನು ಶೃಂಗಾರ ಮಾಡಿಕೊಳ್ಳುವುದು ಹಸುಗಳ ಹಾಲು ಕರೆದ ಬಳಿಕ ; ಅವನ್ನು ಮೇಯಲು ಬಿಡುವಾಗ. (ಇದು ಔಚಿತ್ಯಪೂರ್ಣವಾಗಿ ಕಾಣುತ್ತದೆ.) ಗೊಲ್ಲನು ಹಸುಗಳಿಗೆಲ್ಲ ಬುದ್ಧಿ ಹೇಳುವ ಭಾಗ ಇದರಲ್ಲಿದೆ ; ಗ.ಚ. ಪ್ರತಿಗಳಲ್ಲಿಲ್ಲ. ಸಂಜೆಯ ವೇಳೆಗೆ ಗೊಲ್ಲನು ಮರವನ್ನೇರಿ ಕೊಳಲನ್ನೂದಿ ಹಸುಗಳನ್ನು ಕರೆಯುವ ವಿಷಯ ಗ. ಚ. ಪ್ರತಿಗಳಲ್ಲಿಲ್ಲ. ಗೋವು ಹುಲಿಗೆ ಭಾಷೆ ಕೊಡುತ್ತ ಹೇಳಿದ ಭಾವನಾತ್ಮಕವಾದ ಮಾತುಗಳು (ಪದ್ಯ ೧೦೫-೧೧೯), ಪುಣ್ಯಕೋಟಿ ದೊಡ್ಡಿಗೆ ಬಂದು ಕಂದನನ್ನು ಸಂತೈಸಿದನಂತರ ಒಡೆಯನ ಆಜ್ಞೆಯನ್ನು ಪಡೆಯುವುದು, ದುಃಖಿಸುವ ಜನರನ್ನು

ಸಂತೈಸುವುದು, (೧೪೯-೧೬೦), ಗೋವಿನ ಸ್ನಾನ-ಗಂಗಾಸ್ತುತಿ, ವ್ಯಾಘ್ರನು ಮನಃಪರಿವರ್ತನೆಯಾಗಿ ಆತ್ಮಾರ್ಪಣೆ ಮಾಡಿದಾಗ ಗೋವು ಮೂರ್ಛೆ ಹೋಗುವುದು, ತ್ರಿಮೂರ್ತಿಗಳು ಬಂದು ಹುಲಿಯನ್ನು ಬದುಕಿಸಿ ಗೋವನ್ನೆಬ್ಬಿಸುವುದು, ಹುಲಿಯಿಂದ ಮೋಕ್ಷಯಾಚನೆ (೧೯೭–೨೦೩), ಗೋವೂ ಮುಕ್ತಿಯನ್ನು ಕಾಂಕ್ಷಿಸುವುದು, ತ್ರಿಮೂರ್ತಿಗಳು ಗೋವನ್ನು ಕರುವಿನೊಡನೆ ಬಾಳುವಂತೆ ಹರಸಿ ಕಳುಹಿಸುವುದು, ಕಾಮಧೇನು ಬಂದು ಇಷ್ಟ ಭೋಜನ ನೀಡುವುದು, ಗೋವು ದೊಡ್ಡಿಗೆ ಬಂದು ನಡೆದುದನ್ನೆಲ್ಲಾ ತಿಳಿಸುವುದು, ಒಡೆಯನಿಗೂ ವೃತ್ತಾಂತವನ್ನು ಅರುಹುವುದು, ಗೊಲ್ಲನು ಪುಣ್ಯಕೋಟಿಯನ್ನು ಸ್ತುತಿಸುವುದು - ಇವು ಈ ಪ್ರತಿಯಲ್ಲಿ ಬರುವ ವಿಶೇಷ ಘಟನೆಗಳಾಗಿವೆ.

**ಗ. ಪ್ರತಿ** : ಇದು ಡಾ|| ಡಿ. ಎಲ್. ನರಸಿಂಹಾಚಾರ್ಯರು ಸಂಪಾದಿಸಿರುವ ಪ್ರತಿ. [ಶ್ರೀಯುತರು ಇದನ್ನು ಸಿದ್ಧಗೊಳಿಸುವುದಕ್ಕಾಗಿ ಉಪಯೋಗಿಸಿ, ತಮ್ಮ ಪುಸ್ತಕದ ಕೊನೆಗೆ ಉಲ್ಲೇಖ ಮಾಡಿರುವ ಪ್ರತಿಗಳಿವು:- ಕ = ಸರಸ್ವತಿ ಭಂಡಾರದ ಓಲೆಯ ಪ್ರತಿ; ಖ= ಮೈಸೂರು ಓರಿಯಂಟಲ್ ಲೈಬ್ರೆರಿಯ ಪ್ರತಿ, ಕೆ.ಎ. 190; ಗ = ಮದ್ರಾಸಿನಲ್ಲಿ ಅಚ್ಚಾದ ಪ್ರತಿ (1889); ಘ = ಮೈಸೂರಿನಲ್ಲಿ ಮುದ್ರಿತವಾದ ಸಚಿತ್ರ ಪ್ರತಿ.] ಈ ಪುಸ್ತಕದ ಮುನ್ನುಡಿಯಲ್ಲಿ ಹೇಳಿರುವ ಮಾತುಗಳಿವು :-

"ಇದನ್ನು ಮೊದಲು ಹೇಳಿದ ಕವಿ ಇದರ ಎಷ್ಟು ಪದ್ಯಗಳನ್ನು ಬಳಸಿದ್ದನೋ ತಿಳಿಯದು. ಈಚಿನವರು ಅದೇ ಧಾಟಿಯಲ್ಲಿ ಪದ್ಯಗಳನ್ನು ಕಟ್ಟಿ ನಡುನಡುವೆ ಸೇರಿಸಿದ್ದಾರೆ. ಹೀಗೆ ಸೇರಿಸಿರುವ ಪದ್ಯಗಳು ಯಾವುವು ಎಂದು ಬೆರಲಿಟ್ಟು ತೋರಿಸುವುದಕ್ಕಾಗುವುದಿಲ್ಲವಾದರೂ ಅವು ಇಂಥವೇ ಇರಬೇಕೆಂದು ಊಹಿಸಬಹುದು. ಎಲ್ಲಾ ಸೇರಿ ಈಗ ಒಟ್ಟು ೧೩೭ ಪದ್ಯಗಳು ಈ ಹಾಡಿನಲ್ಲಿವೆ. ಇತರರು ಸೇರಿಸಿರುವುದನ್ನು ಬಿಟ್ಟು ೧೧೪ ಪದ್ಯಗಳನ್ನು ಇಲ್ಲಿ ಅಚ್ಚು ಮಾಡಿದೆ. ಬಿಟ್ಟಿರುವ ಪದ್ಯಗಳನ್ನು ಬೇರೆ ಮುದ್ರಿಸಿದೆ"

**ಚ. ಪ್ರತಿ** : ಇದು ಹಳೆಯ ಕಾಲದ ದೊರಗು ಕಾಗದದ ಪ್ರತಿ. ನನ್ನ ಈ ಪ್ರತಿಯಲ್ಲಿರುವ ಪದ್ಯಗಳು ೧೨೨.

ಈಗ ಸಂಪಾದಿತವಾಗಿ ಪ್ರಕಟಗೊಳ್ಳುವ ಈ ಗೋವಿನ ಕತೆ ಹಾಡು ೨೩೭ ಪದ್ಯಗಳಿಂದ ಕೂಡಿದೆ. ಈ ಪ್ರತಿಯನ್ನು ಸಿದ್ಧಗೊಳಿಸಿದ ವಿಧಾನವಿದು :

ಕ. ಪ್ರತಿಯ ಎಲ್ಲ ಪದ್ಯಗಳನ್ನೂ ಇಟ್ಟುಕೊಳ್ಳಲಾಗಿದೆ. ಇದರಲ್ಲಿಲ್ಲದೆ ಗ. ಚ. ಪ್ರತಿಗಳಲ್ಲಿ ಕಾಣಿಸುವ ಹೆಚ್ಚಿನ ಹನ್ನೊಂದು ಪದ್ಯಗಳನ್ನು ಆಯಾ ಸಂದರ್ಭದಲ್ಲಿ ಸಮಾವೇಶಗೊಳಿಸಲಾಗಿದೆ. ಅವು ಯಾವುವೆಂಬ ವಿವರ ಸೂಚಿ ಮುಂದೆ (55 ನೆಯ ಪುಟದಲ್ಲಿ) ಬಂದಿದೆ. ಪಾಠಾಂತರಗಳನ್ನು ಅಡಿಟಿಪ್ಪಣಿಯಲ್ಲಿ ಕೊಡಲಾಗಿದೆ. ಕೆಲವೆಡೆ ಹಲವಾರು ಪದ್ಯಗಳೇ ಪಾಠಾಂತರವಾಗಿ ಇವೆ. ಪಾಠಾಂತರ ಸೂಚಿ ಸಂಖ್ಯೆ ಪದ್ಯಗಳಲ್ಲಿ ಆಯಾ ಕಡೆ ಬಲದ ಕೊನೆಯಲ್ಲಿ ಬರುತ್ತದೆ. ಎರಡೂ ಕಡೆ ಪಾಠಾಂತರ ಸಂಖ್ಯೆ ಅನಿವಾರ್ಯವೆನಿಸಿದ ಕಡೆ ಮಾತ್ರ ಬಂದುದುಂಟು- ಅತಿ ದೀರ್ಘ ಪಾಠಾಂತರವಿದ್ದು ಅದರ ಸ್ಥಾನನಿರ್ದೇಶ ಶಂಕಾಸ್ಪದವೆಂದು ತೋರಬಹುದಾದ ಕಡೆ ಮಾತ್ರ ಕೊಟ್ಟಿದೆ. ಪಾಠಾಂತರ ಕೊಡುವಲ್ಲಿ ಅರ್ಥಯುಕ್ತ ಪದರೂಪವಿರಬೇಕೆಂಬುದನ್ನು ಲಕ್ಷಿಸಲಾಗಿದೆ.

# ಗೋವಿನ ಕತೆ ಹಾಡು

ಧರಣಿಮಂಡಲ ಮಧ್ಯದೊಳಗೆ
ಮೆರೆವ ವರ ಕರ್ಣಾಟ[1] ದೇಶದಿ
ಇರುವ ಕಾಳಿಂಗನೆಂಬ ಗೊಲ್ಲನ
ಪರಿಯ ನಾನೆಂತು ಪೇಳ್ವೆನು ||೧||

ರೂಢಿಯೊಳಗರುಣಾದ್ರಿ ಗಿರಿಯು
ನಾಡಿನೊಳಗಿಹುದೊಂದು ಬೆಟ್ಟವು
ರೂಢಿಗಂಬರ[2] ತುಡುಕುವಂದದಿ
ನೋಡಲಚ್ಚರಿಯೆನಿಸಿತು ||೨||

ಸೃಷ್ಟಿಯೊಳಗರುಣಾದ್ರಿ ಯೆಂಬಾ
ಬೆಟ್ಟದಾ ಬಳಸೇಳು ಗಿರಿಗಳು
ನೆಟ್ಟನೆ ಹನ್ನೆರಡು ಯೋಜನ
ದಟ್ಟಯಿಸಿತಾರಣ್ಯದಿ ||೩||

ನಾಗಸಂಪಗೆ ಮಾವು ನೇರಳೆ[3]
ತೇಗ ಚನ್ನಂಗಿ ಬನ್ನಿ ಪಾದರಿ
ಬಾಗೆ[4] ತಿಂತ್ರಿಣಿ ಮತ್ತೆ ಬಿಲ್ವವು

---

[1] ಮೆರೆವುದೈವತ್ತಾರು (ಗ. ಚ.)

[2] ರೂಢಿಗರ್ಬುತ (ಕ) ರೂಢಿಗರ್ಭುತ (ಚ)

[3] ನೇರಿಲು (ಗ) ನೇರಲು (ಚ)

[4] ಭಾಗಿ (ಚ)

ತಾಗಿ[5] ಮೆರೆದವರಣ್ಯದಿ ||೪||

ಆಲವರಳಿಯು ಅತ್ತಿ ಕಿತ್ತಳೆ
ಜಾಲಿಗಿಡಗಳು[6] ಅಗಿಲು ಶ್ರೀಗಂಧ
ಬೇಲ ಬೂತಳೆ ಬಿದಿರು ಬೂರಗ[7]
ಸಾಲು ವನದೊಳಗೊಪ್ಪಿತು[8] ||೫||

ಜಂಬು ನಿಂಬೆಯು ಹಲಸು ಹಾಲೆಯು[9]
ಅಂಬರಕ್ಕೇ ಹರಿವ ಅಡಕೆಯು
ತುಂಬಿ ತುಳುಕುವ ತೆಂಗಿನಾ ಮರ
ಸಂಭ್ರಮದಿ ವನವೊಪ್ಪಿತು[8] ||೬||

ಎಕ್ಕೆ ಎಲಚಿಯು[10] ಲಕ್ಕಿ ಗಿಡಗಳು
ಸೊಕ್ಕಿ ಹಬ್ಬಿದ ಸೀಗೆ ಗಿಡಗಳು[11]
ಉಕ್ಕಿ ಬೆಳೆವಾ ನೆಲ್ಲಿ ಗಿಡಗಳು
ತಕ್ಕಯಿಸಿದವರಣ್ಯದಿ ||೭||

ಆಡಸೋಗೆಯು ಕಾಡುನುಗ್ಗೆಯು

---

[5] ಗ (ಚ)

[6] ಜಾಲತದಗಿಲು (ಗ) ಜಾಲತದಿಗಿಲು (ಚ)

[7] ಬ್ರೂಲವು (ಚ)

[8] ಲೀಲೆಯೊಳು ವನವೊಪ್ಪಿತು (ಗ. ಚ)

[9] ನಿಂಬೆನೇರಿಲು ಹಲಸು ಬೇಲವು (ಗ. ಚ)

[10] ಯಗಚಿಯು (ಚ)

[11] ಸೀಗೆ ಮರಗಳು (ಗ)

ರೂಢಿಯಿಂದಲಿ ಬೆಳೆವ ಹೊನ್ನೆಯು[12]
ಕೂಡಿ ಬೆಳೆವಾ ಈಚಲಿಪ್ಪೆಯು[13]
ರೂಢಿಯೊಳು ವನವೊಪ್ಪಿತು ||೮||

ತೊಂಡೆ ತೊಟ್ಟಿಯು ಸೊಂಡೆಗಿಡ ಭೂ
ಮಂಡಲದೊಳು ಬೆಳೆವ ತೊಳಸಿಯು
ಉಂಡು ಸಂತಸಗೊಂಬ ಮಾದಳೆ[14]
ತಂಡತಂಡದಿ ಮೆರೆದುವು ||೯||

ತಾಳೆ ತಗರಿಯು ಅಗಸೆ ಜಾಜಿಯು
ಪನೆಯ ಈಚಲು ಅತ್ತಿ ಗಿಡಗಳು
ಸೊಕ್ಕಿ ಬೆಳೆವಾ ಗೋಣಿ ಬಸುರಿಯು
ಬಳಸಿ ಮೆರೆದವರಣ್ಯದಿ[15] ||೧೦||

ಮೊಲ್ಲೆ ಮಲ್ಲಿಗೆ ಮುಗುಳು ಸಂಪಗೆ
ಚೆಲ್ವ ಜಾಜಿಯು ಸುರಗಿ ಸುರಹೊನ್ನೆ
ಎಲ್ಲಿ ನೋಡಲು ದವನ ಕೇತಕಿ
ಅಲ್ಲಿ ಮೆರೆದವರಣ್ಯದಿ[16] ||೧೧||

ಕದಳಿಗಳು ದಾಳಿಂಬ ದ್ರಾಕ್ಷೆಯು

---

[12] ತಗ್ಗಿಯು (ಗ. ಚ)
[13] ಈಜಿಯಿಪ್ಪೆಯು (ಗ)
[14] ನೇರಿಲು (1) ನೇರಲು (ಚ)
[15] ಪದ್ಯ ೧೦ ಕ. ಗ. ಗಳಲ್ಲಿಲ್ಲ.
[16] ಪದ್ಯ ೧೧ ಕ. ಚ. ಗಳಲ್ಲಿಲ್ಲ.

ಬದರಿ ಖರ್ಜುರ ಅಂಜುರವು ಬಹು
ವಿಧದ ಫಲ ಸುಮ ವೃಕ್ಷತತಿ ಚಂ
ದದಲಿ ವನದಲ್ಲಿ ಮೆರೆದವು ||೧೨||

ದುಂಡುಮಲ್ಲಿಗೆ ಚೆಂಡುಮಲ್ಲಿಗೆ
ಕೋಲುಮಲ್ಲಿಗೆ ಕದಿರುಮಲ್ಲಿಗೆ
ಹಸುರುಮಲ್ಲಿಗೆ ಸಂಜೆಮಲ್ಲಿಗೆ
ಎಸೆಯುತಿರ್ದುವು ವನದೊಳು ||೧೩||

ಜಾಜಿಮಲ್ಲಿಗೆ ದೂಜಿಮಲ್ಲಿಗೆ
ವರಗುಲಾಬಿಯು ಮುಗುಳುಸಂಪಗೆ
ಪಾರಿಜಾತವು ಸೂರ್ಯಕಾಂತಿಯು
ವನದಿ ರಂಜಿಸುತಿರ್ದವು ||೧೪||

ಮರುಗ ಕೇದಗೆ ರತ್ನಗಂಧಿಯು
ಸುರಗಿ ಸೇವಂತಿಗೆಯು ಕಣಗಿಲೆ
ಪರಿಪರಿಯ ವರ ಪುಷ್ಪತರುಗಳು
ಮೆರೆಯುತಿರ್ದವು ವನದೊಳು ||೧೫||

ಅರುಣ ಸಾರಂಗವರ ಕೋಡಗ
ನರಿಯು ಮುಸುಗಳು ಸಿಂಗಳೀಕವು
ಚಿರತೆ ಶಾರ್ದೂಲಗಳು ತೋಳವು
ಮೆರೆಯುತಿರ್ದವರಣ್ಯದಿ[17] ||೧೬||

---

[17] ಗ. ಚ. ಗಳಲ್ಲಿರುವ ೧೬ರ ಪ್ರತಿಪದ್ಯ-
ವರಹ ಶಾರ್ದೂಲ ಸಿಂಹ ವಾರಣ | ಕರಡಿ ಕಾಡೆಮ್ಮೆ ಕಡವೆ ಮೃಗಗಳು

ಖಡ್ಗ ಮೃಗ ಕಸ್ತೂರಿ ಮೃಗಗಳು
ಕೃಷ್ಣ ಮೃಗಗಳು ಕೆಂಚನಾಯ್ಗಳು
ಕಾಡ ಮಾರ್ಜಾಲಗಳು ಕುರಿಗಳು
ಓಡುತಿರ್ದವರಣ್ಯದಿ ||೧೭||

ಶರಭ ಸಾಳುವ ಹರಿಣ ವಾರಣ
ವರಹ ಕೇಸರಿ ವ್ಯಾಘ್ರ ಕಡವೆಯು
ಕರಡಿಗಳು ಕಾಡ್ಕೋಣ ಮೊಲಗಳು
ಚರಿಸುತಿರ್ದವು ವನದೊಳು ||೧೮||

ಬಣ್ಣದಳಿಲು ಬೆಟ್ಟದುಡುಗಳು[18]
ಕಣ್ಣಿಗ[19] ಪ್ರಿಯವಾದ ಸರ್ಪವು
ನುಣ್ಣನೆಸೆವಾ[20] ಕೀರ ಮರಿಗಳು
ತಣ್ಣಗಿರ್ದವರಣ್ಯದಿ ||೧೯||

ಗಿಳಿಯು ಕೋಗಿಲೆ ನವಿಲು ಟಿಟ್ಟಿಭ[21]
ಹೊಳೆವ ಗಿಡುಗನು ಕೃಷ್ಣ ಪಕ್ಷಿಯು[22]

---

ಅರುಣ ಸಾರಗ ಬೆಕ್ಕು ಜಂಬುಕ | ಮರಿಹುಲ್ಲೆ ಸಿಂಗ ಮುಸುಗಳು (ಚ)
......ಮರೆ ಹುಲ್ಲೆ ಸಿಂಗ ಮುಸುವನು (ಗ)

[18] ಬಣ್ಣದರುಳಿಯ ಬೆಟ್ಟದಾವರೆ (ಗ.ಚ)

[19] ಕಣ್ಣಿಗೆ (ಗ)

[20] ಬಣ್ಣ ಬಣ್ಣವ (ಗ. ಚ.)

[21] ಕಾಡ್ಕೊಳಿ (ಗ. ಚ)

[22] ಪೊಳೆವ ಕಾಡ್ಬೆಕ್ಕು ಲಡಗೆ ರಣಹದ್ದು (ಗ),.........ಲಗಡು…...(ಚ)

ಸುಳಿವ ಗೊರವ ಚಕೋರ ಹಂಸೆಯ[23]
ಬಳಗವೊಪ್ಪಿತು ವನದೊಳು ||೨೦||

ಪಚ್ಚೆಹಕ್ಕಿಯು ಪಾರಿವಾಳವು
ಹೆಚ್ಚಿನಾ ಗೌಜಿಗನ[24] ಹಕ್ಕಿಯು
ಕಚ್ಚಿಯಾಡುವ ಚಿಲೆ ಹಕ್ಕಿಯು
ಹೆಚ್ಚಿ ಮೆರೆದುವರಣ್ಯದಿ ||೨೧||

ಹದ್ದು ಕೊಕ್ಕರೆ ಕಾಡ ಕೋಳಿಯು
ಗಂಡಭೇರುಂಡಗಳು ಗೂಬೆಯು
ಬಾವಲಿಯು ಕಾಳಿಂಗ ಗುಬ್ಬಿಯು
ವನದಿ ಶೋಭಿಸುತಿರ್ದವು ||೨೨||

ಉರುಬಿನಿಂದಾ ಬರುವ ಕರಿಗಳು
ಎರಗಿ ಬರುತಿಹ ಗಂಡ ಮೃಗಗಳು
ತರುಬಿ ಬರುತಿಹ ಮಲೆಯ ಹೋರಿಯು
ಬಳಸಿ ಮೆರೆದವರಣ್ಯದಿ ||೨೩||

ಕೆಂಚನಾಯ್ಗಳು ಕೆಲವು ಕಾಡ್ಕೊಳಿ
ಪಂಚವರ್ಣದ ಪಾರಿವಾಳವು
ಸಂಚಿನಿಂದಾ ಬರುವ ಕಿರುಬನು
ಮುಂಚೆ ಮೆರೆದವರಣ್ಯದಿ ||೨೪||

---

[23] ಸುಳಿವ ಕಾಳಿಂಗ ಹಂಸ ಚಕೋರನ (ಗ. ಚ)

[24] ಗೌಜೀನ (ಗ), ಕಾಡ್ಕೋಜ (ಚ)

ಹೊಂಚಿ ಕಾಯುವ ತೋಳ ನರಿಗಳು
ಅಂಜಿವೋಡುವ ಮೊಲನು ಕಪಿಗಳು
ರಂಜಿಸುತ್ತಿಹ ಕೋಣ ಮರಿಗಳು
ಬಂದು ಮೆರೆದವರಣ್ಯದಿ ||೨೫||

ಚೆಲುವ ಭಾರದ್ವಾಜ ಪಕ್ಷಿಯು
ಲಾವುಗೆಯು ರಣಹದ್ದು ಕೊಕ್ಕರೆ
ಶ್ಯಾಮ ಕುಕ್ಕುಟ ಚಕ್ರಪಕ್ಷಿಯು
ವನದಿ ರಂಜಿಸುತಿರ್ದವು ||೨೬||

ಪೃಥ್ವಿ[25] ಯೊಳಗರುಣಾದ್ರಿ ಗಿರಿಯ[26]
ಒತ್ತಿನೊಳಗಿಹ ಪುಣ್ಯತೀರ್ಥವು
ಸತ್ಯ ಸಾಗರ ಮುಂದೆ ಗೌತಮಿ
ಉತ್ತಮದಿ[27] ನದಿ ಮೆರೆದವು ||೨೭||

ಯಮುನೆ ಫಲ್ಗುಣಿ ಕೃಷ್ಣವೇಣಿಯು
ನರ್ಮದೆಯು ಕಾವೇರಿ ಗಂಗೆಯು
ಭೀಮರಥಿ ವರ ತುಂಗಭದ್ರೆಯು
ಗಿರಿಯ ಪ್ರಾಂತದಿ ಮೆರೆದವು ||೨೮||

ವರ ಸರಸ್ವತಿ ಗಂಡಕಿಯು ಪು
ಷ್ಕರಿಣಿ ತೀರ್ಥವು ಕಪಿಲೆ ಗೋದಾ

---

[25] ಸೃಷ್ಟಿ (ಚ)
[26] ಗಿರಿಯು (ಗ)
[27] ಉತ್ತಮಾ (ಗ. ಚ)

ವರಿಯು ಭಾಗೀರಥಿ ಕುಮುದ್ವತಿ
ಗಿರಿಯ ಸುತ್ತಲು ಮೆರೆದವು ||೨೯||

ಗಿರಿಯ ಪ್ರಾಂತದ ಶಿಲೆಯ ಗೃಹದಿ
ಇರುವ ಮುನಿಗಳು ತಪದಲಿರ್ದರು[28]
ಪರಮ ಮುನಿಜನ ಬ್ರಹ್ಮಋಷಿಗಳು
ಹರಿಯ ಧ್ಯಾನದೊಳಿರ್ದರು[29] ||೩೦||

ಗಿರಿಗಳೆಡೆಯೊಳು ಆಡವಿ ಮಧ್ಯದಿ
ತುರುವ ದೊಡ್ಡಿಯ ಮಾಡಿಕೊಂಡು
ಇರುವ ಕಾಳಿಂಗನೆಂಬ ಗೊಲ್ಲನ
ಪರಿಯ ನಾನೆಂತು ಪೇಳ್ವೆನು ||೩೧||

ಗೊಲ್ಲ ದೊಡ್ಡಿಯೊಳಿರುವ ಪಶುಗಳು
ಎಲ್ಲ ಬೆಟ್ಟದ ಮೇಲೆ ಮೇಯುತ
ಒಳ್ಳೆ ಹುಲ್ಲನು ನೀರು ಕುಡಿಯುತ[30]
ಅಲ್ಲಿ ಮೆರೆದುವರಣ್ಯದಿ[31] ||೩೨||

ತಿರುಗಿ ಮನೆಗೆ ಬರುತ ಪಶುಗಳು
ಕರುಗಳನು ನೆನೆನೆನೆದು ಒದರುತ
ಪರಿದು ಲಂಘಿಸಿ ಚಿಮ್ಮಿ ನೆಗೆಯುತ

---

[28] ತಪಸಿ ಸಿದ್ಧರು (ಗ. ಚ.)

[29] ಧ್ಯಾನದೊಳಿರುವರು (ಕ)

[30] ನೀರ್ಗಳಿಂದಲಿ (ಗ)

[31] ಚರಿಸುತ್ತಿರ್ದವು (ಚ)

ಭರದಿ ಬಂದವು ದೊಡ್ಡಿಗೆ ||೩೩||

ತಮ್ಮ ತಾಯ್ಗಳ ಕಂಡು ಕರುಗಳು
ಅಮ್ಮ ಎಂದೂ[32] ಕೂಗಿ ನಲಿಯುತ
ಸುಮ್ಮಾನದೊಳು ಮೊಲೆಯನುಂಡು
ನಿರ್ಮಲದೊಳು ಇದ್ದವು ||೩೪||

ಉದಯ ಕಾಲದೊಳೆದ್ದು ಗೊಲ್ಲನು
ನದಿಯ ಸ್ನಾನವ ಮಾಡಿಕೊಂಡು
ಮದನ ತಿಲಕನ ಪಣೆಯೊಳಿಟ್ಟು
ಚದುರಸಿಕೆಯನು ಹಾಕಿದ[33] ||೩೫||

ಮಲ್ಲಮರ್ದನ ಹರಿಯ ಧ್ಯಾನಿಸಿ
ಒಳ್ಳೆಯಾ ದುಗುಲವನು[34] ಹೊದ್ದು
ಬೆಳ್ಳಿಯಂಡೆಯ ಕೈಲಿ ಹಿಡಿದು
ಎಲ್ಲ ಗೋಗಳ ಕರೆದನು[35] ||೩೬||

ಎಳೆಯ ಮಾವಿನ ಮರದ ಕೆಳಗೆ
ಕೊಳಲನೂದುತ[36] ಗೊಲ್ಲ ಗೌಡನು

---

[32] ಅಮ್ಮನೆಂದೂ (ಗ. ಚ)

[33] ಮುದದಿ ಪೀತಾಂಬರವನುಟ್ಟು | ಮದನ ತಿಲಕನನಿಟ್ಟನು (ಕ)
ಚದುರ ಶಿಖಿಯನು ಹಾಕಿದ (ಚ)

[34] ಗೊಲ್ಲ ಶೃಂಗಾರೀಸಿಕೊಂಡು ಒಳ್ಳೆ ದುಕುಲಗಳನ್ನು (ಗ)
ಗೊಲ್ಲ ತಾ ಶೃಂಗರಿಸಿಕೊಂಡು ಒಳ್ಳೆ ಚಂದ್ರಗಾವಿ (ಚ)

[35] ಗ. ಚ. ಪ್ರತಿಗಳಲ್ಲಿ ಈ ಪದ್ಯಕ್ಕೆ ಮೊದಲು ಗೊಲ್ಲನು ಶೃಂಗಾರ ಮಾಡುವ ಐದು ಪದ್ಯಗಳಿವೆ.

[36] ಕೊಳಲ ಪಿಡಿದನು (ಚ)

ಬಳಸಿ ನಿಂದಿಹ[37] ತುರುಗಳನ್ನು
ಬಳಿಗೆ ಕರೆದನು ಹರುಷದಿ ||೩೭||

ಪಾರ್ವತೀ ಲಕ್ಷ್ಮೀಯೆ[38] ಬಾರೇ
ಸರಸ ಸದ್ಗುಣ ವನಿತೆ[39] ಬಾರೇ
ಸರಸ್ವತಿಯ ಮಾಣಿಕವೆ ಬಾರೆಂದು
ಸರಸದಿಂದಲಿ[40] ಕರೆದನು ||೩೮||

ಉದಯ[41] ಭಾಸ್ಕರ ದೇವಿ ಬಾರೇ
ಚದುರಗುಣ ಸಂಪನ್ನೆ ಬಾರೇ
ಹೃದಯ ನಿರ್ಮಲೆ ನೀನು[42] ಬಾರೆಂದು
ಮುದದಿ ಗೊಲ್ಲನು[43] ಕರೆದನು ||೩೯||

ಧರ್ಮದೇವಿಯೆ ನೀನು ಬಾರೇ
ಧರ್ಮಗುಣದಾ[44] ತಾಯಿ ಬಾರೇ
ಧರ್ಮವತಿಯೇ ನೀನು ಬಾರೆಂದು
ಪೆರ್ಮೆಯಿಂದಲಿ[45] ಕರೆದನು ||೪೦||

---

[37] ಬರುವ (ಗ) ಯಿರುವ (ಚ)
[38] ಲಕ್ಷ್ಮಿಯು (ಗ. ಚ)
[39] ವತಿಯು (ಚ)
[40] ಸರಸದಿಂ ಗೊಲ್ಲ (ಗ. ಚ)
[41] ಹೃದಯ (ಚ)
[42] ಧರೆಯ ಸಲಹುವ ದೇವಿ (ಚ)
[43] ಹರುಷದೊಳು ಗೊಲ್ಲ (ಗ)
[44] ಕಾಳಿ ಬಾರೇ ಕಪಿಲೆ ಬಾರೇ ಕೆಂಪಗರುವಿನ (ಗ. ಚ)
[45] ಪ್ರೇಮದೊಳು ಗೊಲ್ಲ (ಗ. ಚ)

ಗಂಗೆ ಬಾರೇ ಗೌರಿ ಬಾರೇ
ತುಂಗಭದ್ರೆ ನೀನು ಬಾರೇ
ಅಂಗನಾಮಣಿ ನೀನು ಬಾರೆಂದು
ಅಂಗವಿಸಿ ತಾ[46] ಕರೆದನು ||೪೧||

ರಂಗನಾಯಕಿ ನೀನು ಬಾರೇ
ರಘುಕುಲೋತ್ತಮೆ ನೀನು ಬಾರೇ
ಅಂಗನಾಮಣಿ ನೀನು[47] ಬಾರೆಂದು
ಅಂಗಯಿಸಿ ತಾ ಕರೆದನು ||೪೨||

ಪುಣ್ಯಕೋಟಿಯೆ ನೀನು ಬಾರೇ
ಪುಣ್ಯವಾಹಿನಿ[48] ನೀನು ಬಾರೇ
ಪುಣ್ಯ[49] ಗುಣಸಂಪನ್ನೆ ಬಾರೆಂದು
ನಾಣ್ಯದಿಂ[50] ಗೊಲ್ಲ ಕರೆದನು ||೪೩||

ಕಾಮಧೇನುವೆ ನೀನು ಬಾರೇ
ಭೂಮಿದೇವಿಯೆ ನೀನು ಬಾರೇ
ರಾಮಗಿಣಿಯೇ[51] ನೀನು ಬಾರೆಂದು

---

[46] ಗೊಲ್ಲ (ಗ. ಚ)
[47] ಶೃಂಗಾರದ ಸೊಬಗಿ (ಗ)
[48] ಪಾವನೆ (ಚ)
[49] ಪೂರ್ಣ (ಗ. ಚ)
[50] ಪ್ರೇಮದಿಂ (ಚ)
[51] ರಾಮನರಗಿಣಿ (ಗ. ಚ)

ಪ್ರೇಮದಿಂದಲಿ[52] ಕರೆದನು ||೪೪||

ಭಾಗ್ಯಲಕ್ಷ್ಮಿಯೆ ನೀನು ಬಾರೇ
ಭಾಗ್ಯಗುಣಚಾರಿತ್ರೆ ಬಾರೇ
ಯೋಗವತಿಯೇ[53] ನೀನು ಬಾರೆಂದು
ಬೇಗದಿಂದಲಿ ಕರೆದನು ||೪೫||

ಇಂದುವದನೆಯೆ ನೀನು ಬಾರೇ
ಮಂದಗಮನೆಯೆ ನೀನು ಬಾರೇ
ಕುಂದರದನೆಯೆ ನೀನು ಬಾರೆಂದು
ಚಂದದಿಂದಲಿ ಕರೆದನು ||೪೬||

ಕಮಲಗಂಧಿಯೆ ನೀನು ಬಾರೇ
ಕಮಲದಳ ಲೋಚನೆಯೆ ಬಾರೇ
ಕಮಲಮಿತ್ರ ಪ್ರಭೆಯೆ ಬಾರೆಂದು
ಸುಮತಿ ಗೊಲ್ಲನು ಕರೆದನು ||೪೭||

ತ್ರಿಜಗವಂದಿತೆ ನೀನು ಬಾರೇ
ಭುಜಗವೇಣಿಯೆ ನೀನು ಬಾರೇ
ಗಜಗಮನೆ ಬಾರೆಂದು ಶ್ರೀಹರಿ
ಭಜಕ ಗೊಲ್ಲನು ಕರೆದನು ||೪೮||

ಆದಿಲಕ್ಷ್ಮಿಯು ನೀನು ಬಾರೇ

---

[52] ಪ್ರೇಮದಿಂ ಗೊಲ್ಲ (ಗ. ಚ)

[53] ಯೋಗ್ಯವಂತೆಯು (ಚ)

ಆನಂದ ದ್ಯುತಿ ನೀನು ಬಾರೇ
ಪರಮ ಪಾವನೆ ನೀನು ಬಾರೆಂದು
ಪ್ರೇಮದಿಂ ಗೊಲ್ಲ ಕರೆದನು[54] ||೪೯||

ರುಕ್ಮಿಣೀದೇವೀಯು ಬಾರೇ
ರೂಪಪಾವನೆ ನೀನು ಬಾರೇ
ಸರಸ ಸದ್ಗುಣವತಿಯು ಬಾರೆಂದು
ಹರುಷದಿಂ ಗೊಲ್ಲ ಕರೆದನು ||೫೦||

ಸತ್ಯಭಾಮೆ ನೀನು ಬಾರೇ
ಸಕಲ ಲಕ್ಷಣವತಿಯು ಬಾರೇ
ಸತ್ಯವಂತೆಯು ನೀನು ಬಾರೆಂದು
ಸರಸದೊಳ್ ಗೊಲ್ಲ ಕರೆದನು ||೫೧||

ಹುಣ್ಣಿಮೆಯ ಚಂದ್ರಮನೆ ಬಾರೇ
ಹೊಳೆವ ಕಂಗಳ ಕಾಂತಿ ಬಾರೇ
ಅಂಗನಾಮಣಿ ನೀನು ಬಾರೆಂದು
ಅಂಗಯಿಸಿ ಗೊಲ್ಲ ಕರೆದನು ||೫೨||

ಗೊಲ್ಲ ಕರೆದಾ ಧ್ವನಿಯ ಕೇಳಿ
ಎಲ್ಲ ಹಸುಗಳು ಬಂದು ನಿಂತು[55]
ಚೆಲ್ಲಿ ಸೂಸಿ ಹಾಲ ಕರೆಯಲು

---

[54] ೪೯, ೫೦, ೫೧, ೫೨- ಈ ನಾಲ್ಕು ಪದ್ಯಗಳು ಕ. ದಲ್ಲಿಲ್ಲ. ಇವು ಗ. ಪ್ರತಿಯಲ್ಲಿ ಬಿಟ್ಟಿರುವ ಪದ್ಯಗಳ ಭಾಗದಲ್ಲಿ ಕೊಡಲಾಗಿವೆ.
[55] ಬಂದವಾಗ (ಗ. ಚ)

ಅಲ್ಲಿ ತುಂಬಿತು ಬಿಂದಿಗೆ[56] ||೫೩||

ತಂದು ಬಿಂದಿಗೆಗಳನು ಬೇಗದಿ
ಮಂದಿರದ ಒಳಗಿಟ್ಟು ಶೌರಿಗೆ
ಚಂದದಿಂದರ್ಪಿಸುತ ಗೊಲ್ಲನು
ಅಂದು ಸಿಂಗರವಾದನು ||೫೪||

ಉಟ್ಟ ದಟ್ಟಿಯು ಪಟ್ಟೆ ಚಲ್ಲಣ
ತೊಟ್ಟ ಪದಕವು ಬಿಲ್ಲೆ ಸರಗಳು
ಕಟ್ಟಿ ಬಾಪುರಿ ಭುಜದ ಕೀರ್ತಿಯು
ಇಟ್ಟ ಮುದ್ರಿಕೆಯುಂಗುರ[57] ||೫೫||

ಪಚ್ಚೆ ಕಡಗವ ಪವಳ ಸರವನು[58]
ಹೆಚ್ಚಿನಾ ಕಾಲ್ಕಡಗ ಗೆಜ್ಜೆಯ[59]
ಪೆಚ್ಚುತನದಲಿ ಧರಿಸಿ ಮೆರೆದನು
ಮುತ್ತಿನಾ ಸರದಿಂದಲಿ[60] ||೫೬||

ಇಟ್ಟು[61] ಮುತ್ತಿನ ಒಂಟಿ ಬಾವುಲಿ

---

[56] ಎಲ್ಲ ಬಿಂದಿಗೆ ತುಂಬಿತು (ಕ)
[57] ಗ. ಚ. ಪ್ರತಿಗಳಲ್ಲಿ ಗೊಲ್ಲನು ಶಂಗಾರವಾಗುವ ಈ (೫೫- ೫೯) ನಾಲ್ಕು ಪದ್ಯಗಳು ಆತ ಹಾಲು ಕರೆವ ಮೊದಲೇ ಬರುತ್ತವೆ.
[58] ಕಡಕವು ಪವಳದಾ ಸರ (ಗ)
[59] ಕಾಲ್ಪೆಂಡೆ ಮೆರೆದವು (ಚ)
[60] ನಿಶ್ಚಿಂತಾನಂದದಲಿ ಮೆರೆದನು | ಮುತ್ತಿನಾ ಸರಪದಕವು (ಗ)
ಚೆಲ್ವ ಮುತ್ತಿನ ಸರವು ಪದಕವು ನಿಶ್ಚಿಂತದಲಿ ಮೆರೆದನು (ಚ)
[61] ಇಟ್ಟ (ಗ. ಚ)

ಕಂಠಮಾಲೇ ಪದಕ ಸರಗಳ
ದಿಟ್ಟತನದಲಿ ಧರಿಸಿ ಮೆರೆದನು
ಕಂಟಿ[62] ಮೊದಲಾದೊಡನೆಯ ||೫೭||

ನೀಲದೊಂಟಿಯು ತಾಳಿ ಚೌಕುಳಿ
ಕಾಲ ಕಡಗವು ಮೇಲೆ ಬಾಪುರಿ
ನೀಲ ಕೆಂಪಿನ ವಜ್ರದುಂಗುರ[63]
ಲೋಲ ಧರಿಸಿಯೇ ಮೆರೆದನು ||೫೮||

ಚಂದ್ರಗಾವಿಯ ಅಂಗಿ ತೊಟ್ಟು[64]
ಇಂದ್ರನೀಲದ ಸಾಗು ಸುತ್ತಿ[65]
ಚಂದ್ರಕಾಂತಿಯ ದುಪಟಿಯನ್ನು
ಚಂದದಿಂದಲಿ ಪೊದ್ದನು ||೫೯||

ಅಂದದಲಿ ಸಿಂಗರಿಸಿಕೊಂಡು
ಸಂದಣಿಸಿದಾ ಪಶುಗಳನ್ನು
ಚಂದದಿಂದಾರಣ್ಯಕೇ 'ಗೋ
ವಿಂದ' ಎನುತಲಿ ಹೊಡೆದನು ||೬೦||

ಒಡನೆ ದೊಡ್ಡಿಯ ಬಿಡುತ ಪಶುಗಳು
ನಡೆದವಾಗ ಅರಣ್ಯಕಾಗಿ

---

[62] ಗಂಟೆ (ಗ. ಚ)

[63] ನೀಲದುಂಗುರ ಕಾಲ ಸರಗಳು (ಗ. ಚ)

[64] ಅಂಗಿಯಿಕ್ಕಿದ (ಚ)

[65] ಸುತ್ತಿದ (ಚ)

ಕಡಲ ಮೇಘವು ತೆರಳುವಂದದಿ
ನಡೆದವಾಗಲೆ ಅಡವಿಗೆ[66] ||೬೧||[67]

ಎಣಿಕೆ[68] ಹುಲ್ಲೆಯ ವರ್ಣದಾವು
ಉನ್ನತ ಬಟ್ಟ[69] ಕೆಂದ ಹಾವು
ಸನ್ನುತವಾದ ಕಪಿಲೆ ಗೋವ್ಗಳು
ಉನ್ನತವಾಗಿ ನಡೆದವು[70] ||೬೨||

ಕರುವುಗಳು ಕಡಸುಗಳು ಹೋರಿಯು[71]
ಸರಿಯ ಹರೆಯದ ಎತ್ತುಗಳು ಮೇಣ್[72]
ಭರಿತ[73] ಪ್ರಾಯದ ಹಸುಗಳೆಲ್ಲಾ
ತೆರಳಿ ನಡೆದವರಣ್ಯಕೆ[74] ||೬೩||

ನೆಟ್ಟ ಕೊಂಬಿನ ಮೋಟ ಕೊಂಬಿನ
ಮಟ್ಟಕೊಂಬಿನ ಕಾಕಿಗಣ್ಣಿನ
ಚೊಟ್ಟ ಕೊಂಬಿನ ಹಸುಗಳೆಲ್ಲಾ
ದಿಟ್ಟತನದಲಿ ನಡೆದವು ||೬೪||

---

66 ನಡೆದವಾಗಾರಣ್ಯಕೆ (ಗ. ಚ)

67 (ಗ. ಚ) ಪ್ರತಿಗಳಲ್ಲಿ 'ಗೊಲ್ಲ ಕರೆದಾ ಧ್ವನಿಯ' ಎಂಬ ಪದ್ಯಾನಂತರ ಈ ಪದ್ಯ ವಿದೆ.

68 ಯನಗೆ(ಚ) (ಆಕರ ಪುಸ್ತಕದಲ್ಲಿ ಮುದ್ರಣ ಸ್ಪಷ್ಟವಿಲ್ಲ)

69 ...ತ ಬೆಟ್ಟದ (ಗ) (ಆಕರ ಪುಸ್ತಕದಲ್ಲಿ ಮುದ್ರಣ ಸ್ಪಷ್ಟವಿಲ್ಲ)

70 ಈ ಪದ್ಯ ಕ. ದಲ್ಲಿಲ್ಲ.

71 ಕರುವುಗಾಳು ಎತ್ತು ಗಾಳು (ಗ. ಚ)

72 ಎತ್ತು ಗಾಳು (ಗ. ಚ)

73 ದುರುಳು (ಗ) ದುರುಳ (ಚ)

74 ತೆರಳಿದಾವಾರಣ್ಯಕೆ (ಕ. ಗ)

ಘೋರ ಕಾನನದೊಳಗೆ ಗೊಲ್ಲನು
ಸಾರಿ ಹೇಳಿದ ಪಶುಗಳಿಗೆ ನೀವ್
ಬೇರೆ ಬೇರೆಯೆ ಸಂಚರಿಸದಿರಿ
ಸೇರಿ ಜತೆಯೊಳೆ ಮೇಯಿರಿ ||೬೫||

ಹುಲ್ಲು ನೀರಿನ ತಳವ ನೋಡಿ
ಅಲ್ಲಿ ಹುಲ್ಲನು ಮೇದು ನಿತ್ಯವು
ಒಳ್ಳೆ ನೀರನು ಮುದದಿ ಕುಡಿಯುತ
ಎಲ್ಲರೊಟ್ಟಿಗೆ ಬನ್ನಿರಿ ||೬೬||

ಬಿಟ್ಟು ಹಿಂಡನು ತಿರುಗಬೇಡಿರಿ
ಕೆಟ್ಟ ಹುಲಿಗಳು ಹೊಂಚುತಿರುವವು
ಒಟ್ಟಿಲೆಲ್ಲರು ಮುದದಿ ಮೇಯುತ
ಒಟ್ಟುಗೂಡುತ ಬನ್ನಿರಿ ||೬೭||

ಚೂತವೃಕ್ಷದ ಬುಡದಿ ನಾನು
ಸಂತಸದಿ ಮಲಕೊಂಡು ಸೂರ್ಯನ
ಅಸ್ತ ಕಾಲದೊಳೆದ್ದು ಕರೆವೆನು
ಕೊಳಲನೂದುತ ನಿಮ್ಮನು ||೬೮||

ಕೊಳಲ ದನಿಯನು ಕೇಳಿದಾಕ್ಷಣ
ಉಳಿಯದೆಲ್ಲರು ಬೇಗ ಎನ್ನಯ
ಬಳಿಗೆ ಬರುವದು ಮರೆಯದಿರಿ ನೀವ್
ತಿಳಿಯಿರೆನ್ನಾಜ್ಞೆಗಳನು ||೬೯||

ಇಂತು ಬುದ್ಧಿಯ ಪೇಳಿ ಮುದ್ದಿಸಿ
ಹಸ್ತದಿಂದಲಿ ಸವರಿ ಮೈಯನು
ಚೂತ ವೃಕ್ಷದ ಬುಡವ ಸೇರುತ
ಸಂತಸದಿ ಪವಡಿಸಿದನು ||೭೦||

ಒಡೆಯನಪ್ಪಣೆ ಶಿರದಿ ಧರಿಸಿ
ಒಡನೆ ಪಶುಗಳು ಹರುಷದಿಂದಲಿ
ಅಡವಿಯೊಳಗಣ ಎಳೆಯ ಹುಲ್ಲನು
ಬಿಡದೆ ಮೇಯುತಲಿರ್ದವು ||೭೧||

ಅಟ್ಟಬೆಟ್ಟದ ಕಿಬ್ಬಿಯೊಳಗೆ
ಇಟ್ಟೆಡೆಯ ಬೆಟ್ಟಗಳ[75] ನಡುವೆ
ದಟ್ಟಯಿಸಿದಾ ಸಸಿಗಳೆಡೆಯೊಳು
ಮುಟ್ಟಿ[76] ಮೇದವು ಹುಲ್ಲನು ||೭೨||

ಅಕ್ಕಿಯಂತಹ[77] ಹುಲ್ಲುಗಳನು
ಸಕ್ಕರೆಯ ಸವಿವಂತೆ ಸವಿದು
ಅಕ್ಕರೆಯ ತಿಳಿನೀರ ಕುಡಿದು[78]
ಸೊಕ್ಕಿ ಸಂತಸಗೊಂಡವು ||೭೩||

---

[75] ಬೆಟ್ಟಾದ (ಗ)
[76] ಮುಟ್ಟಿ (ಗ. ಚ)
[77] ಅಕ್ಕಿಯಂತ (ಗ. ಚ)
[78] ಅಕ್ಕರಿಂದಾಹಾರಗೊಂಡು (ಗ. ಚ)

ನಳಿನ ಮಿತ್ರಾಸ್ತಮಯವಾಗಲು
ಗಳಿಲನೆದ್ದು ಮರವನೇರಿ
ಕೊಳಲನೂದುತ ಎಲ್ಲ ಪಶುಗಳ[79]
ಬಳಿಗೆ ಕರೆದನು ಗೊಲ್ಲನು ||೭೪||

ಗೊಲ್ಲ ಕರೆದಾ ಧ್ವನಿಯ ಕೇಳಿ
ಎಲ್ಲ ಪಶುಗಳು ಒಟ್ಟು ಗೂಡುತ
ನಿಲ್ಲದೆಲ್ಲಿಯು ತಮ್ಮ ಒಡೆಯನ
ಬಳಿಗೆ ಬಂದವು ಭರದಲಿ ||೭೫||

ಹರುಷದಿಂದಲಿ ಬಂದ ಪಶುಗಳ
ಕರೆದು ತಂದನು ಗೊಲ್ಲ ಗೌಡನು
ಕೊರಲ ಗಂಟೆಯು ಧಣಿರುಧಣಿರೆನೆ
ಮರಳಿ ಬಂದವು ದೊಡ್ಡಿಗೆ ||೭೬||

ಹಬ್ಬಿದಾ ಮಲೆ ಮಧ್ಯದೊಳಗೆ
ಅರ್ಬುತನು ಎಂದೆಂಬ[80] ವ್ಯಾಘ್ರನು
ಗಬ್ಬಿತನದೊಳು ಬೆಟ್ಟದಡಿಯಾ
ಕಿಬ್ಬಿಯೊಳು ತಾನಿರುವನು ||೭೭||

ಒಡಲಿಗೇಳೂ ದಿವಸದಿಂದ
ತಡೆದು ತೀನಿಯ[81] ಬಳಲಿ ವ್ಯಾಘ್ರನು

---

[79] ಹರಿದು ಮೇದ ಪಶುಗಳನ್ನು (ಗ. ಚ)
[80] ಅರ್ಬುತಾನೆಂದೆಂಬ (ಗ)
[81] ತಡೆದಾಹಾರವ (ಗ. ಚ)

ಅಡಗಿಕೊಂಡು ಗವಿಯೊಳಗೆ ಹೊರ
ನುಡಿಯನಾಲಿಸುತಿರ್ದನು[82] ||೭೮||

ಕೊರಳ ಗಂಟೆಯ ಧ್ವನಿಯ ಕೇಳಿ[83]
ಎರಗಲಾಕ್ಷಣ[84] ವ್ಯಾಘ್ರನೆದ್ದು
ಹರಿದು ಆಹಾರಗೊಂಬೆನೆನುತಲಿ
ಹೊರಗೆ ಹೊರಡುತ[85] ಬಂದಿತು ||೭೯||

ಸಿಡಿದು ರೋಷದಿ ಗರ್ಜಿಸುತ[86] ಹುಲಿ
ಗುಡುಗುಡಿಸಿ ಭೋರಿಡುತ ಭರದಲಿ[87]
ತುಡುಕಲೆರಗಿದ ರಭಸಕಂಜಿ
ಓಡಿಹೋದವು ಪಶುಗಳು[88] ||೮೦||

ಅದರ ರಭಸಕೆ ನಿಲ್ಲಲಾರದೆ[89]
ಕದುಬಿ ಕಮರಿಯ ಬಿದ್ದು ಪಶುಗಳು
ಬೆದರಿ ತಲ್ಲಣಗೊಳ್ಳುತೆಲ್ಲವು

---

[82] ಅಡಗಿಕೊಂಡೂ ಗವಿಯ ಬಾಗಿಲ ಹೊರನುಡಿಯ ಅಲಿಸುತಿರ್ದನು (ಗ)
ಗವಿಯ ಬಾಗಿಲೊಳಡಗಿಕೊಂಡು ಹೊರನುಡಿಯ ಲಾಲಿಸುತಿರುವನು (ಚ)

[83] ಧ್ವನಿಯು ಕರ್ಣಕೆ (ಗ)

[84] ಎರಗಿತಾಕ್ಷಣ (ಚ)

[85] ಹೊರಹೊರಟು ತಾ (ಗ)

[86] ಸಿಡಿಲ ಘೋಷದಿ ಮೊರೆಯುತಾ (ಗ. ಚ)

[87] ವ್ಯಾಘ್ರನು (ಗ.ಚ)

[88] ತುಡುಕಿಯೆರಗಿದ ರಭಸದಿಂದೊ | ಗ್ಗೊಡೆದವಾಗಾ ಗೋವ್ಗಳು (ಗ. ಚ)

[89] ನಿಲ್ಲಲರಿಯದೆ (ಗ. ಚ)

ಚೆದರಿ ಓಡಿ ಹೋದವು[90] ||೮೧||

ಚೆಲ್ಲಿವೋಡುವ ಪಶುಗಳನ್ನು
ಸಿಕ್ಕಲಿಲ್ಲಾ ಎನುತ ವ್ಯಾಘ್ರನು
ಅಲ್ಲಿ ಕೋಪದಿ ಹಲ್ಲು ಕಡಿಯುತ
ದಿಕ್ಕು ದಿಕ್ಕಿಗೆ ನೋಡಿತು ||೮೨||

ತನ್ನ ಕಂದನ ನೆನೆದುಕೊಂಡು
ಮುನ್ನ ಹಾಲನು ಕೊಡುವೆನೆನ್ನುತ[91]
ಪುಣ್ಯಕೋಟಿ ಎಂಬ ಪಶುವು
ಗಣ್ಯವಿಲ್ಲದೆ[92] ಬರುತಿರೆ ||೮೩||

ಹರುಷದಿಂದಲಿ ನಲಿದು ನೆಗೆಯುತ
ದೂರದಿಂದಲಿ ಬರುವ ಪಶುವನು
ಕ್ರೂರ ವ್ಯಾಘ್ರನು ಕಂಡು ಮನದಲಿ
ಭೂರಿ ಹರುಷವ ತಾಳಿತು[93] ||೮೪||

ಇಂದೆನಗೆ ಆಹಾರ ಸಿಕ್ಕಿತು

---

[90] ಪದರಿ ತಲ್ಲಣಗೊಂಡು ಪಶುಗಳು.... (ಗ)
.......ತಲ್ಲಣಗೊಂಡು ಓಡಿ | ಚೆದರಿ ನಾಲ್ದೆಸೆಯಾದವು (ಚ)
[91] ಕನ್ನೆ ಮಗನ ಪಡೆದ ಪಶುವು | ತನ್ನ ಕಂದನ ನೆನೆದುಕೊಂಡು (ಗ. ಚ)
[92] ಚೆನ್ನಾಗಿ ತಾ (ಗ. ಚ)
[93] ಕೋಮಲತೆಯಿಂ ನಲಿದು ನೆಗೆಯುತ | ಆ ಮಹಾಟವಿ ಮಧ್ಯದಲ್ಲಿ
ಪ್ರೇಮದಿಂದಲಿ ಬರುವ ಪಶುವನು | ಭೂಮಿಯೊಳು ಹುಲಿ ಕಂಡಿತು (ಗ.)
ಪ್ರೇಮದಿಂದಲಿ ಕರುವ ನೆನೆಯುತ | ಆ ಮಹಾರಣ್ಯದಲಿ ಬರುವುದ (ಚ)

ಎಂದು ಬಹಳಾನಂದದಿಂದಲಿ[94]
ಬಂದು ಬಳಸೀ ಅಡ್ಡಗಟ್ಟಿ
ನಿಂದನಾ ಹುಲಿರಾಯನು[95] ||೮೫||

ನಿಲ್ಲುನಿಲ್ಲೆಲೆ ಎಲ್ಲಿ ಹೋಗುವೆ
ಹಲ್ಲ ಕಳಚಿಯೆ ಬಿಡುವೆ ನಿನ್ನಯ
ಎಲ್ಲ ನೆಗ್ಗುವೆನೆಂದು ಹೇಳಿತು
ಖುಲ್ಲ ವ್ಯಾಘ್ರನು ಗರ್ಜಿಸಿ ||೮೬||

ಹೊಲವ[96] ಗದ್ದೆಯ ಹಾಳುಮಾಡಿದೆ
ಬೆಳೆವ ಪೈರನು ಸವಿದು ಕೆಡಿಸಿದೆ
ಬಳಿಕಲೆನ್ನಯ ಗವಿಯ ಬಳಿಗೇ
ತಳುಗದೇ[97] ನೀ ಬಂದೆಯ ||೮೭||

ಎಂದು ಹುಲಿಯು ಅಡ್ಡಗ್ಗಟ್ಟಲು[98]
ಮುಂದುವರಿದಾ ಪಶುಗಳೆಲ್ಲವು[99]
ಒಂದಕೊಂದು ಭಯದೊಳೋಡಿ
ಮುಂದೆ ದೊಡ್ಡಿಗೆ ಬಂದವು ||೮೮||

---

94 ಇಂದು ಎನಗಾಹಾರ ಸಂದಿತು | ಎನುತಲಾಗ ದುಷ್ಟ ವ್ಯಾಘ್ರನು (ಗ)
ಇಂದು ಎನಗೇ ಆಹಾರವೂ | ಸಂದಿಸೀತೆಂದು ವ್ಯಾಘ್ರನು (ಚ)

95 ಕೊಂಡಿತಾಗ ಪಶುವನು (ಚ)

96 ಹೊಲನ (ಗ. ಚ)

97 ಕಳುಹದೇ (ಕ)

98 ಅಡ್ಡ ಗಟ್ಟಿ (ಗ) ಅಡಗಟ್ಟಿ (ಚ)

99 ಹಿಂದೆಮುಂದಿಹ ಪಶುಗಳೆಲ್ಲ (ಗ) ಹಿಂದೆ ಮುಂದೇ ಇದ್ದ ಪಶುಗಳು (ಚ)

ಪುಣ್ಯಕೋಟಿ ಎಂಬ ಪಶುವನು
ತಿನ್ನುವೆನು ತಾನೆಂದು[100] ಹುಲಿಯು
ಚೆನ್ನ ಹಸುವನು ತಿಂಬೆನೆಂದು[101]
ಗನ್ನದಿಂದಬ್ಬರಿಸಿತು[102] ||೮೯||

ಮೇಲೆ ಬೀಳುತ ನಿನ್ನ ನೀಗಲೆ
ಬೀಳಹೊಯ್ವೆನು ನಿನ್ನ ಹೊಟ್ಟೆಯ
ಸೀಳಿ ಬಿಸುಡುವೆನೆನುತ ಕೋಪದಿ
ಖೂಳ ಹುಲಿಯಾರ್ಭಟಿಸಲು[103] ||೯೦||

ಹುಲಿಯ ಮಾತನು ಪುಣ್ಯಕೋಟಿಯು
ಕೇಳಿ ವಿಸ್ಮಯಗೊಂಡು ಮನದೊಳು
ಹೇಳಿಕೊಂಡಳು ವ್ಯಾಘ್ರನೊಂದಿಗೆ
ಶೀಲವತಿ ಬಲು ವಿನಯದಿ ||೯೧||

ಕಾಲಿಗೆರಗುವೆ ವ್ಯಾಘ್ರರಾಯನೆ
ಹೇಳಿಕೊಂಬೆನು ಎನ್ನ ಬಿನ್ನಪ
ಲಾಲಿಪುದು ನೀ ಕರುಣದಿಂದಲಿ
ತಾಳಿ ಶಾಂತಿಯ ಮನದೊಳು ||೯೨||

---

100 ತಾನು ತಿಂದೇನೆಂದು (ಗ. ಚ)

101 ಚೆನ್ನ ಗೋವನು ಅಡ್ಡಗಟ್ಟಿ (ಗ. ಚ)

102 ತಿನ್ನ ಯತ್ನೀಕರಿಸಿತು (ಗ) ಬೀಳಹೊಯ್ವೆನು ಎನುತಲಿ (ಚ)

103 ಖೂಳ ಹುಲಿಯು ಅಡ್ಡ ಗಟ್ಟಿ | ಬೀಳಹೊಯ್ವೆನು ನಿನ್ನನೆನುತಲಿ
ಸೀಳಿ ಬಿಸುಡುವೆ ಬೇಗವೆನುತ | ಪ್ರಳಯವಾಗಿಯೆ ಕೋಪಿಸಿ (ಗ)
.......ಪ್ರಳಯವಾಗಿರೆ ವ್ಯಾಘ್ರನು (ಚ)

ಹಾಳುಮಾಡುವಳಲ್ಲ ಹೊಲಗಳ
ಬೆಳೆಯ ಕೆಡಿಸುವಳಲ್ಲ ಸವಿದು[104]
ಬಾಳುವಂತೆಯೇ ಮಾಳ್ಪೆ ಧರೆಯೊಳು
ಕೇಳಯ್ಯ ಹುಲಿರಾಯನೆ ||೯೩||

ನಾನು ಮೆಟ್ಟಿದ ಭೂಮಿ ಬೆಳೆವುದು
ಧಾನ್ಯ ಧನಗಳನುಂಟುಮಾಡುವೆ
ಶಾನೆ[105] ಹಾಲನು ಕೊಡುವೆ ನಿತ್ಯವು[106]
ಮಾನವರಿಗುಪಕಾರಿಯು ||೯೪||

ಅಡವಿಯೊಳಗಣ ಹುಲ್ಲು ಮೇಯುವೆ
ಮಡುವಿನೊಳಗಣ ನೀರು ಕುಡಿಯುವೆ
ಒಡೆಯನಪ್ಪಣೆಯಂತೆ ನಡೆವೆನು[107]
ಕಡೆಹಾಯಿಸೊ ಹುಲಿರಾಯನೆ ||೯೫||

ಬೇಡಿಕೊಂಬೆನು ನಾನು ನಿನ್ನೊಳು
ಮಾಡು ದಯೆಯನು ನೀನು ಎನ್ನೊಳು
ಕೇಡನೆಣ್ಣಿಸದೆನಗೆ ಪೋಗಲು
ಬಿಡುವದೆನ್ನಯ ದೊಡ್ಡಿಗೆ ||೯೬||

---

[104] ಹಾಳುಮಾಡುವ ಗರತಿಯಲ್ಲಿ ಬೀಳು ಮಾಡುವ ಗೈನೆಯಲ್ಲ (ಗ)
……ಬೀಳುಮಾಡುವ ಸುದತಿಯಲ್ಲ (ಚ)

[105] ಶ್ಯಾನೆ (ಚ)

[106] ಮಕ್ಕಳಿಗೆ (ಕ)

[107] ಒಡೆಯನಾಜ್ಞೆಯಿಂದಲಿರುವೆನು (ಗ) ಒಡೆಯನಾಜ್ಞೆಯಲ್ಲಿರುವೆನು (ಚ)

ಉತ್ತರಗಳನು ಕೊಡಲು ಹುಲಿಯು
ಮತ್ತೆ ಕೋಪದಿ ರೌದ್ರ ತಾಳಿ
ಕತ್ತು ಮುರಿಯುವೆ[108] ಕಚ್ಚಿ ಒದರುವೆ
ರಕ್ತ ಹೀರುವೆನೆಂದಿತು ||೯೭||

ಒಂದು ಬಿನ್ನಹ ಹುಲಿಯೆ ಕೇಳು
ಕಂದನಿರುವನು ದೊಡ್ಡಿಯೊಳಗೆ[109]
ಒಂದು ನಿಮಿಷದಿ ಮೊಲೆಯ[110] ಕೊಟ್ಟು
ಬಂದು ಸೇರುವೆನಿಲ್ಲಿಗೆ[111] ||೯೮||

ಮಗನ ನೆನೆದು ಮೋಹ ಬಲಿದು
ಹೋಗುತಲಿದೇ ಮೊಲೆಯ ಹಾಲು
ಮಗನಿಗೀಗಲೆ ಮೊಲೆಯ ಕೊಟ್ಟು
ಮಗುಳೆ ಬಂದಿಲ್ಲಿ ನಿಲುವೆನು[112] ||೯೯||

ಹಸಿದ ವೇಳೆಗೆ ಸಿಕ್ಕಿದೊಡನೆಯ
ವಶವ ಮಾಡದೆ ಬಿಡಲು ನೀನು[113]
ನುಸುಳಿ ಹೋಗುವೆ ಮತ್ತೆ[114] ಬರುವೆಯ

---

108 ಕತ್ತ ಮುರಿವೆನು (ಗ) ಕತ್ತು ಮುರಿವೆನು (ಗ)
109 ಒಂದು ಬಿನ್ನಹ ಹುಲಿಯರಾಯನೆ | ಕಂದನೈದನೆ ಮನೆಯವೊಳಗೆ (ಗ)
110 ಕಂದನಿಗೆ ಮೊಲೆವಾಲು ಕೊಟ್ಟು (ಚ)
111 ಬಂದು ನಾನಿಲ್ಲಿ ನಿಲ್ಲುವೆ (ಗ) ಬಂದು ನಿಲ್ಲುವೆ ಇಲ್ಲಿಗೆ (ಚ)
112 ೯೯ನೆ ಪದ್ಯ ಕ. ಗ. ಪ್ರತಿಗಳಲ್ಲಿಲ್ಲ.
113 ಮಾಡಿಕೊಳ್ಳದೀಗ (ಗ. ಚ)
114 ಹೋದರೆ ನೀನು (ಗ. ಚ)

ಹುಸಿಯನಾಡುವೆ ಎಂದಿತು[115] ||೧೦೦||

ಸತ್ಯವೆಂಬುದೆ ತಾಯಿ ತಂದೆಯು
ಸತ್ಯವೆಂಬುದೆ ಬಂಧು ಬಳಗವು
ಸತ್ಯವಾಕ್ಯಕೆ ತಪ್ಪಿ ನಡೆದರೆ
ಸತ್ಯ ಶ್ರೀಹರಿ ಮೆಚ್ಚನು[116] ||೧೦೧||

ಮುನ್ನ ಪಾಂಡವ ಸತಿಯು ಹುಸಿದು
ತನ್ನ ನಿಜವನು ತಪ್ಪಿ ನಡೆದಳು
ನಿನ್ನ ನಂಬುವರಾರು ಸಿಕ್ಕಿದ[117]
ನಿನ್ನ ಬಿಡುವೆನೆ ಎಂದಿತು[118] ||೧೦೨||

ಅಂಗನೆಯರಿಗೆ ಎಲ್ಲಿ ಸತ್ಯವು
ಹೆಂಗಳೊಳಗುಂಟೈದು ಗುಣಗಳು
ಚೆಂಗಿ ಹೋದರೆ ನಿನ್ನ ಬಿಡುವೆನೆ
ಹೋಗಬಿಡೆ ನಾನೆಂದಿತು[119] ||೧೦೩||

ಎನಲು ಸುರಭಿಯು ಕೇಳಿ ಮಾತನು

---

115 ಹಸನಾಯಿತೀಗೆಂದಿತು (ಗ) ಹಸನಾಯ್ತು ಈಗೆಂದಿತು (ಚ)

116 ೧೦೧ನೆಯ ಪದ್ಯ ಗ.ದಲ್ಲಿಲ್ಲ. ಚ.ದಲ್ಲಿ ಪಾಠಾಂತರ ಹೀಗಿದೆ :-
ಸತ್ಯವೇ ನಮ್ಮ ತಾಯಿತಂದೆಯು | ಸತ್ಯವೇ ನಮ್ಮ ಬಂಧುಬಳಗವು
ಸತ್ಯವಾಕ್ಯಕೆ ತಪ್ಪಿದಾರೆ | ಅಚ್ಯುತ ಹರಿ ಮೆಚ್ಚನು (ಚ)

117 ಈಗ (ಗ. ಚ)

118 ನಾ ಬಿಡೆನೆಂದಿತು (ಗ. ಚ)

119 ಅಂಗನೇಯರಿಗೆಲ್ಲಿ ಸತ್ಯವು | ಆಡಿ ಹುಸಿವರು ಆರು ಗುಣದಲಿ
ನುಸುಳಿ ಹೋದರೆ ನೀನು ಬರುವೆಯ | ಹಸನಾಯ್ತು ಈಗೆಂದಿತು (ಗ. ಚ)

ಏನು ಯೋಚನೆ ಮಾಡಲಿನ್ನು
ಘನದ ಭರವಸೆ ಕೊಟ್ಟು ಬೇಗದಿ
ನಾನು ಬರುವೆನು ಎನ್ನುತ ||೧೦೪||

ನೋಡು ಪುಲಿ ನೀಯೆನ್ನ ನಿಜವನು
ನಾಡಿನೊಳಗಪಕೀರ್ತಿ ತರುವ
ಗಾಡಿಕಾತಿಯು ಅಲ್ಲ ನಾನು
ರೂಢಿಯಿಂದಲಿ ಸತ್ಯವು ||೧೦೫||

ನಿನಗೆ ಅಭಯವ ಕೊಡುವೆ ಕೇಳು
ಅನುಮನಸು ನೀ ಮಾಡಬೇಡ
ಎನಗೆ ತೋರಿದ ನಿಜವ ನಿನಗೆ
ಘನದ ಭಾಷೆಯ ಕೊಡುವೆನು ||೧೦೬||

ಮೂರು ಮೂರ್ತಿಗಳಾಣೆ ಬರುವೆನು
ಸೂರ್ಯ ಚಂದ್ರಮರಾಣೆ ಬರುವೆನು
ಧಾರಿಣೀ ದೇವ್ಯಾಣೆ ಬರುವೆನು
ಎಂದು ಭಾಷೆಯ ನುಡಿಯಿತು[120] ||೧೦೭||

ಅಷ್ಟ ದಿಕ್ಪಾಲಕರು ಸಾಕ್ಷಿ
ಶ್ರೇಷ್ಠ ನವಗ್ರಹ ತಾರೆ ಸಾಕ್ಷಿ
ಸೃಷ್ಟಿಯ್ಯೆ ಪತಿವ್ರತೆರ ಸಾಕ್ಷಿ
ನಿಷ್ಠೆಯಿಂದಲಿ ಕೇಳಯ್ಯ ||೧೦೮||

---

[120] ಮಾಡಿತು (ಗ. ಚ)

ಆದಿಶೇಷಾನಿಲರು ಸಾಕ್ಷಿ
ವೇದಶಾಸ್ತ್ರ ಪುರಾಣ ಸಾಕ್ಷಿ
ಮೋದದಿಂದಾಕಾಶವಗ್ನಿಯು
ಸಾಕ್ಷಿ ಸತ್ಯವು ಕೇಳಯ್ಯ ||೧೦೯||

ಎನ್ನ ವಂಶದ ನಿಜವ ಪೇಳ್ವೆನು
ಮನ್ನಿಸೈ ಹುಲಿರಾಯ ನೀನು
ಎನ್ನ ದೇಹದ ಬಗೆಯ ತಿಳಿಯೋ
ಇನ್ನು ಎಲ್ಲಾ ಪೇಳ್ವೆನು ||೧೧೦||

ಎನ್ನ ಉಚ್ಛ್ವಾಸಗಳೆ ವೇದವು
ಎನ್ನ ನೇತ್ರವೇ ಸೂರ್ಯಚಂದ್ರರು
ಎನ್ನ ಕರ್ಣವೆ ಇಂದ್ರಲೋಕವು
ಎನ್ನ ದೇಹವಿದೊಳ್ಳಿತು ||೧೧೧||

ನಾಲ್ಕು ಪಾದವೆ ದಿಕ್ಕು ನಾಲ್ಕು
ನಿಜದಿ ನೋಡಲು ರೋಮ ಸುರರು
ಬೆಳಕ ತೋರುವ ಜ್ಯೋತಿ ತಲೆಯು
ಇಳೆಯೊಳಿಂತಿದು ದೇವರು ||೧೧೨||

ಎನ್ನ ಕೆಚ್ಚಲೆ ಲೋಕವೆಲ್ಲಾ
ಎನ್ನ ಮೊಲೆಗಳೆ ಪದವಿ ನಾಲ್ಕು
ಎನ್ನ ಸಾರವೆ ಅಮೃತಪದವಿದು
ಎನ್ನ ಗೋಪುರ ಮೇರುವೆ ||೧೧೩||

ಎನ್ನ ರಸವೇ ಪಂಚಗವ್ಯವು
ಎನ್ನ ವಂಶವೆ ಯಜ್ಞ ತಪಗಳು
ಎನ್ನ ದೇಹವೆ ಸ್ವರ್ಗ ತೋರ್ಪುದು
ಎನ್ನ ಪೆಸರೇ ಮೋಕ್ಷವು ||೧೧೪||

ಇಂತು ನಿನಗಿದ ತಿಳಿಯ ಪೇಳಿದೆ
ಕಂತುಹರ ಬಲ್ಲೆನ್ನ ಸತ್ಯವ
ಇಂತು ನಿನಗೇ ಕೊಟ್ಟ ಭಾಷೆಯ
ಎಂತು ತಪ್ಪುವದಿಲ್ಲವು ||೧೧೫||

ಹರಿಯು ಹರನೂ ಬಹ್ಮದೇವರು
ಸುರನರರು ಗಂಧರ್ವ ಕಿನ್ನರ
ಗರುಡ ಯಕ್ಷರು ಸಿದ್ಧ ಸಾಧ್ಯರು
ಪರಮ ಪುರುಷರು ಮೆಚ್ಚಲಿ ||೧೧೬||

ಎಷ್ಟು ಕಾಲವು ಇರುವುದಲ್ಲ
ನಷ್ಟವಾಗುವ ದೇಹ ನೆಚ್ಚಿ
ನಿಷ್ಠೆಯನು ನಾ ಮರೆತು ಬಹುತರ
ಭ್ರಷ್ಟಳಾಗುವದೇತಕೆ ||೧೧೭||

ನೀರ ಮೇಲಣ ಗುಳ್ಳೆಯಂದದಿ
ತೋರಿಯಡಗುವ ತನುವನಿತ್ಯವು
ಧೀರತನದಲಿ ಸತ್ಯ ನಡೆಸುವೆ
ಕರುಣವೆನ್ನೊಳು ತೋರಯ್ಯ ||೧೧೮||

ಎನುತ ಭಾಷೆಯ ಕೊಡಲು ವ್ಯಾಘ್ರನು
ಮನದಿ ಕರುಣವ ತೋರಿ ಪಶುವಿಗೆ
ಕ್ಷಣದಿ ಬರುವದು ತಳುವದೆಂದ
ಪ್ಪಣೆಯ ಕೊಟ್ಟಿತು ಗರ್ಜಿಸಿ[121] ||೧೧೯||

ವ್ಯಾಘ್ರನಾಜ್ಞೆಯ ಪಡೆದು ದೊಡ್ಡಿಗೆ
ಶೀಘ್ರದಿಂದಲಿ ಬಂದು ತನ್ನನು
ನೋಡಿ ಹಸುಗಳು ಹರುಷಗೊಳುತಿರೆ
ಓಡಿ ಮಗನನು ಕರೆದಳು[122] ||೧೨೦||

ಮುದ್ದು ಮೊಗದಾ ಮಗನೆ ಬಾರೋ
ಗುದ್ದಿ ಮೊಲೆಯನ್ನುಣ್ಣು ಬಾರೋ
ಮುದ್ದು ನೀನೀ ಗೋವುಗಳ ನಡು
ವಿದ್ದು ಬುದ್ಧಿಲಿ ಬಾಳಿರು[123] ||೧೨೧||

ಕಟ್ಟಕಡೆಯಲಿ ಮೇಯಬೇಡ[124]

---

121 ಪಾಠಾಂತರ:
ಬರುವೆನೆಂದು ಭಾಷೆ ಮಾಡಿ | ತಪ್ಪೆನೆಂದಾ ಪುಣ್ಯಕೋಟಿಯು
ಒಪ್ಪಿಸಲೊಡಂಬಟ್ಟು ವ್ಯಾಘ್ರನು | ಅಪ್ಪಣೆಯ ತಾ ಕೊಟ್ಟಿತು (ಗ. ಚ)
122 ಅಲ್ಲಿಂದ ಕಳುಹೀಸಿಕೊಂಡು | ನಿಲ್ಲದೇ ದೊಡ್ಡಿಗೆ ಬಂದು
ಚೆಲ್ವ ಮಗನನು ಕಂಡು ಬೇಗ | ಅಲ್ಲಿ ಕೊಟ್ಟಿತು ಮೊಲೆಯನು (ಗ)
....ಆಗ ತಮ್ಮಾ ಬಳಗವೆಲ್ಲ | ಬೇಗ ಸಂತಸಗೊಂಡವು (ಚ)
123 ಮಗನೆ ಬಾರೋ ಮೊಲೆಯ ಕುಡಿಯೋ | ಹೇಗೆ ಬದುಕಿಯೊ ಏನನರಿಯೆ
ಬೇಗ ಬಾರೋ ಕಂದ ಎನುತಲಿ | ಮಗನ ನೋಡಿಯೆ ಎಂದಳು (ಗ)
....ಮಂದೆಯಾ ಗೋವುಗಳಲ್ಲಿ | ಬುದ್ಧಿಯಾಗಿ ಬಾಳಯ್ಯ (ಚ)
124 ಮೇಯದೀರು (ಗ.ಚ)

ಬೆಟ್ಟದೊತ್ತಿಗೆ ಹೋಗಬೇಡ[125]
ದುಷ್ಟ ವ್ಯಾಘ್ರನು ಹೊಂಚುತಿರುವನು
ನಟ್ಟ ನಡುವಿರು ಕಂದನೆ[126] ||೧೨೨||

ಹಳ್ಳದೊತ್ತಿಲಿ ಮೇಯದಿರು ನೀ
ಕಲ್ಲು ಬೆಟ್ಟಕೆ ಹೋಗದೇ ಇರು[127]
ಅಲ್ಲಿ ದುಷ್ಟ ವ್ಯಾಘ್ರನಿರುವನು
ನಟ್ಟ ನಡುವಿರು ಕಂದನೆ[128] ||೧೨೩||

ಅಡವಿಯೊಳಗೆ ದೊಡ್ಡ ವ್ಯಾಘ್ರನು
ತಡೆದನೆನ್ನನು ತಿಂಬೆನೆನುತಲಿ
ಕೊಡುವೆ ನಿನಗೆ ಮೊಲೆಯನೆಂದು
ನಡೆದು ಬಂದೆನು ದೊಡ್ಡಿಗೆ[129] ||೧೨೪||

ಕೊಂದು ತಿನ್ನುವೆನೆಂಬ ಹುಲಿಗೆ[130]
ಚಂದದಿಂದಲಿ ಭಾಷೆಯಿತ್ತು

---

[125] ಹೋಗದೀರು (ಗ.ಚ)
[126] ದುಷ್ಟ ವ್ಯಾಘ್ರಗಳುಂಟು ಅಲ್ಲಿ | ನಟ್ಟನಡುವೆ ಬಾರಯ್ಯನೇ (ಗ)
ಅಲ್ಲಿ ದುಷ್ಟ ವ್ಯಾಘ್ರನುಂಟು | ನಟ್ಟ ನಡುವೇ ಬಾರಯ್ಯ (ಚ)
[127] ಹಳ್ಳದೊತ್ತಿಲಿ ಮೇಯದೀರೊ | ಬೆಟ್ಟದೊತ್ತಿಗೆ ಹೋಗದೀರೊ (ಚ)
[128] ೧೨೩ನೆಯ ಪದ್ಯ ಗ.ದಲ್ಲಿಲ್ಲ.
[129] ಇಂದು ಒಂದು ದುಷ್ಟ ವ್ಯಾಘ್ರನು | ತಿಂದೆನೆನುತಲಿ ಬಂದಿತಯ್ಯ
ಕಂದ ನಿನಗೆ ಮೊಲೆಯ ಕೊಡುವೇ | ನೆಂದು ಬಂದೆನು ದೊಡ್ಡಿಗೆ (ಗ)
ಅಡವಿಯೊಳಗೊಂದು ದೊಡ್ಡ ವ್ಯಾಘ್ರನು | ತಿಂಬೆನೆನುತ ಬಂದಿತಯ್ಯ
ಕಂದನಿಗೆ ಮೊಲೆ ಕೊಟ್ಟು ಬರುವೆ | ನೆಂದು ಬಂದೆ ಕಂದಯ್ಯನೆ (ಚ)
[130] ಕೊಂದೆನೆಂಬಾ ದುಷ್ಟ ವ್ಯಾಘ್ರಗೆ (ಗ.ಚ)

ಕಂದ ನಿನ್ನನು ನೋಡಿ ಹೋಗುವೆ[131]
ನೆಂದು ಬಂದೆನು ದೊಡ್ಡಿಗೆ ||೧೨೫||

ದುಷ್ಟ ವ್ಯಾಘ್ರಕೆ ಕೊಟ್ಟ ಭಾಷೆಗೆ
ಸೃಷ್ಟಿಯೊಳಗೆ ಹರಣ ತೊರೆವುದು
ಶ್ರೇಷ್ಠವೇನೇ ಹೇಳು ನೀನು
ಶಿಷ್ಟಗುಣ ಸಂಪನ್ನೆಯೆ ||೧೨೬||

ಅಮ್ಮ ನೀನು ಸಾಯಲೇಕೆ[132]
[133]ನಮ್ಮ ತಬ್ಬಲಿ ಮಾಡಲೇಕೆ
ಸುಮ್ಮನಿಲ್ಲಿಯೆ ನಿಲ್ಲು ಎಂದು
ಅಮ್ಮನಿಗೆ ಕರು ಹೇಳಿತು[133] ||೧೨೭||

ಕೇಳಿ ಮಗನ ಬುದ್ಧಿಯನ್ನು
ತಾಳಿ ಹರುಷವ ಸತ್ಯವೆಂದು
ಬಾಳಿ ಬದುಕುವ ಭಾಗ್ಯ ನಿನ್ನದು
ಬಾಳಿಕೊಂಡಿರು ಸುಖದೊಳು[134] ||೧೨೮||[135]

ಕೊಟ್ಟ ಭಾಷೆಗೆ ತಪ್ಪಲಾರೆನು

---

131 ನಿನಗೆ ಮೊಲೆಯ ಕೊಡುವೆ (?) (ಆಕರ ಪ್ರತಿಯಲ್ಲಿ ಮುದ್ರಣ ಬಿಟ್ಟು ಹೋಗಿದೆ)
132 ಸಾಯಲೇತಕೆ (ಗ. ಚ)
133 ಸುಮ್ಮನಿರು ಎಲ್ಲಾರ ಹಾಗೆ | ತಮ್ಮ ತಾಯಿಗೆ ಪೇಳಿ ಕರುವು |
ಸುಮ್ಮಾನವಡಗಿ ನಿಂದಿತು (ಗ),
ಸುಮ್ಮನಿರುವಾ ಎಲ್ಲಾರ ಹಾಗೆ.....ಸುಮ್ಮಾನನಾಗಿ ನಿಂದಿತು (ಚ)
134 ಮುಂದರಿತು ನೀ ಬಾಳಯ (ಗ)
135 ೧೨೮ನೇ ಪದ್ಯ ಚ. ದಲ್ಲಿಲ್ಲ.

ಕೆಟ್ಟ ಯೋಚನೆ ಮಾಡಲಾರೆನು
ನಿಷ್ಠೆಯಿಂದಲಿ ಪೋಪೆನಲ್ಲಿಗೆ
ಕಟ್ಟ ಕಡೆಗಿದು ಖಂಡಿತ ||೧೨೯||

ಎನ್ನ ಬಿನ್ನಹ ಲಾಲಿಸಮ್ಮ
ನಿನ್ನ ದೇಹವು ಅಳಿದ ಮೇಲೆ
ನನ್ನ ಬದುಕಿಂದೇನು ಸಾರ್ಥಕ
ನಾನು ಸಾಯುವದುಚಿತವು ||೧೩೦||

ಇಬ್ಬರೊಟ್ಟಿಗೆ ಹೋಗುವಾ ನ
ಮ್ಮಿಬ್ಬರನ್ನೂ ಭಕ್ಷಿಸಲಿ ಹುಲಿ
ಒಬ್ಬರಳಿದಿನ್ನೊಬ್ಬರುಳಿಯಲು
ಬಾರದೆಂದೇ ಹೇಳಿತು ||೧೩೧||

ಮಾತನೆಲ್ಲವ ಲಾಲಿಸುತ್ತಿರೆ
ಪ್ರೀತಿಯಿಂದಲಿ ತಬ್ಬಿಕೊಂಡು
ಅರ್ಥಿಯಿಂದಲಿ ಮೊಲೆಯನಿತ್ತು
ನೀತಿಧರ್ಮವ ಪೇಳ್ದಳು ||೧೩೨||

ಸತ್ಯವೇ ನಮ್ಮ ತಾಯಿ ತಂದೆಯು
ಸತ್ಯವೇ ನಮ್ಮ ಬಂಧುಬಳಗವು
ಸತ್ಯವಾಕ್ಯಕೆ ತಪ್ಪಿ ನಡೆದರೆ[136]
ಸತ್ಯ ಶ್ರೀಹರಿ[137] ಮೆಚ್ಚನು ||೧೩೩||

---

[136] ತಪ್ಪಿದಾರೆ (ಗ)

[137] ಅಚ್ಯುತಾ ಹರಿ (ಗ. ಚ)

ಕೊಟ್ಟ ಭಾಷೆಗೆ ತಪ್ಪಿ ನಡೆದರೆ[138]
ಸೃಷ್ಟಿಯೊಳು ಶ್ರೀ ಹರಿಯು ಮೆಚ್ಚನು
ಎಷ್ಟು ಕಾಲವು ಕಾಯವಿರುವುದು[139]
ಕೇಳು ನೀ[140] ಕಂದಯ್ಯನೆ ||೧೩೪||

ಹಸಿದ ವ್ಯಾಘ್ರಗೆ ಹರುಷದಲಿ ನಾ
ನಶನವಾಗಲು ಸರ್ವದುರಿತವು
ನಸಿದು ಹೊಂದುವೆ ಮುಕ್ತಿಯನು ಲಾ
ಲಿಸುವುದೆನ್ನಯ ವಾಕ್ಯವ ||೧೩೫||

ಆರ ಮೊಲೆಯನು ಕುಡಿಯಲಮ್ಮ
ಆರ ಸೇರಿ ಬದುಕಲಮ್ಮ
ಆರ ಬಳಿಯಲಿ ಮಲಗಲಮ
ಆರು ಎನಗೇ ಹಿತವರು ||೧೩೬||

ಕಂದ ಪೇಳಿದ ಮಾತ ಕೇಳಿ
ಬಂಧುವರ್ಗಕ್ಕೆಲ್ಲ ಮಣಿದು
ಚಂದದಿಂದಲಿ ತನ್ನ ವಾರ್ತೆಯ
ಹೇಳಿ ಬಿನ್ನಹಗೈದಳು ||೧೩೭||

ಅಮ್ಮಗಳಿರಾ ಅಕ್ಕಗಳಿರಾ

---

138 ತಪ್ಪಿದಾರೆ (ಗ.ಚ)
139 ಎಷ್ಟು ಕಾಲ ಇರುವುದೀ ಕಾಯ (ಗ. ಚ)
140 ಕಟಕಟಾ (ಗ) ಕೇಳಯ್ಯಾ (ಚ)

ನಮ್ಮ ಕಂದನ ಸಲಹಿಕೊಳ್ಳಿರಿ[141]
ನಿಮ್ಮ ಕಂದಾನೆಂದು [142]ಭಾವಿಸಿ
ತಬ್ಬಲಿಯನೀ ಕರುವನು[142] ||೧೩೮||

ಮುಂದೆ ಬಂದರೆ ಹಾಯಬೇಡಿರಿ[143]
ಹಿಂದೆ ಬಂದರೆ ಒದೆಯಬೇಡಿರಿ[144]
ನಿಮ್ಮ ಕಂದಾನೆಂದು ಕಾಣಿರಿ
ತಬ್ಬಲಿಯನೀ ಕರುವನು[145] ||೧೩೯||

ಕೇಳೆ ತಾಯೇ ನೀನು ಅಳಿದು
ಬಾಳಿ ನಾವಿನ್ನಾವ ಫಲವು
ಬಳಗವೆಲ್ಲವು ನಿನ್ನ ಸಂಗಡ
ಕೂಡಿ ನಾವೂ ಬರುವೆವು[146] ||೧೪೦||

ಅಮ್ಮ ನೀವೂ ನನ್ನ ಸಂಗಡ
ಧರ್ಮವಲ್ಲವು ಬರುವದೆಂದಿಗು[147]
ಮುನ್ನ ನಾನು ಪಡೆದ ಫಲವಿದು

---

141 ಎನ್ನ ತಾಯೊಡಹುಟ್ಟುಗಳಿರಾ (ಗ. ಚ)
142 ಕಂಡಿರಿ ತಬ್ಬಲೀ ಮಗನ್ನೈದನೆ (ಗ.ಚ)
143 ಹಾಯದೀರಿ (ಗ.ಚ)
144 ಒದೆಯದೀರಿ (ಗ.ಚ)
145 ತಬ್ಬಲೀ ಮಗನ್ನೈದನೆ (ಗ.ಚ)
146 ಅಮ್ಮ ಕೇಳೇ ಪುಣ್ಯಕೋಟಿಯೆ | ನೀನು ಹೋಗಿ ಸಾಯಲೇತಕೆ
ಬಳಗವೆಲ್ಲವು ಕೂಡಿ ನಿನ್ನ | ಸಂಗಡಲೆ ನಾವ್ ಬರುವೆವು (ಗ)
ಅಮ್ಮ ಕೇಳೆ......ಸಂಗಡಾ ನಾವ್ ಬರುವೆವು (ಚ)
147 ಬರುವುದೀಗ ಉಚಿತವಲ್ಲ (ಗ.ಚ)

ಎನ್ನ ಬಿಡುವುದೆ ಎಂದಿತು[148] ||೧೪೧||

ಅಮ್ಮ ಕೇಳೇ ಪುಣ್ಯಕೋಟಿಯೆ
ನಿಮ್ಮ[149] ಕಂದನು ನಮ್ಮ ಕಂದನು
ನಿಮ್ಮ[149] ಮನದೊಳು ಭೇದವೇತಕ
ನಿರ್ಮಲಾದೊಳಿರಮ್ಮನೆ ||೧೪೨||

ಅಮ್ಮ ನೀವು ಎಲ್ಲರಿರಲು
ಎನ್ನ ಮನದೊಳು ಭೇದ[150] ವೇತಕೆ
ನಿಮ್ಮ ಕಂದಾನೆಂದು [151]ಸಲಹಿರಿ
ತಬ್ಬಲೀಯಾಗಿರ್ಪನು[151] ||೧೪೩||

ತಬ್ಬಲಿಯು ನೀನಾದೆ[152] ಮಗನೆ
ಹೆಬ್ಬುಲಿಯ ಬಾಯನ್ನು[153] ಹೊಗುವೆನು
ಇಬ್ಬರಾ ಋಣ ತೀರಿತೆಂದು
ತಬ್ಬಿಕೊಂಡಿತು[154] ಕಂದನ ||೧೪೪||

ಅಮ್ಮನೆಂದು ಕರೆವ ಬಾಯಲಿ

---

[148] ಎನ್ನನು ತಾ ಬಿಡುವುದೆ (ಚ)

[149] ನಿನ್ನ (ಗ. ಚ)

[150] ಖೇದ (ಗ. ಚ)

[151] ಕೊಂಡಿರಿ ತಬ್ಬಲಿ ಮಗನೈದನೆ (ಗ. ಚ)

[152] ತಬ್ಬಲಿಯಾದೆಲ್ಲೊ (ಗ), ತಬ್ಬಲೀಯಾದೇಯೊ (ಚ)

[153] ಬಾಯೀಗೆ (ಗ. ಚ)

[154] ಕೊಂಡಳು (ಗ.ಚ)

ಮಣ್ಣು ಹಾಕಿದ ಹರಿಯು[155] ಎನುತಲಿ
ಎನ್ನ ಪುಣ್ಯದ ಭಾಗ್ಯವನ್ನು
ಯಾರಿಗೇ ನಾನುಸುರಲಿ ||೧೪೫||

ನಿನ್ನ ಬಸಿರಲಿ ಏಕೆ ಹುಟ್ಟಿದೆ[156]
ಅನ್ಯಕಾರಿ ಪಾಪಿ ನಾನು
ಇನ್ನು ಅಮ್ಮಾ ಎಂದು ಯಾರನು[157]
ಎನ್ನಲೆಂದು ಹೊರಳಿತು[158] ||೧೪೬||

ಕಂದ ನಿನಗೆ ದುಃಖವೇತಕೆ
ಚಂದದಿಂದಲಿ ಬಾಳು ಧರೆಯಲಿ
ಹಿಂದೆ ನಾನು[159] ಪಡೆದ ಫಲವಿದು
ಇಂದು ಬಿಡುವುದೆ ಎನ್ನನು[160] ||೧೪೭||[161]

ಕಂದ ಕೇಳ್ ಪ್ರಾರಬ್ಧದಾ ವಶ

---

[155] ಶಿವನು (ಗ.ಚ)
[156] ಉದರದಿ ಯಾಕೆ ಜನಿಸಿದೆ (ಕ)
[157] ಅಮ್ಮನೆನುತ್ತ ಯಾರನು, ಅಮ್ಮಾನೆಂದು ಯಾರ (ಚ)
[158] ಎನ್ನ ಪ್ರೇಮದಿ ಕರೆಯಲಿ (ಗ), ಕರೆಯಲೆನುತ ಧರೆಯೊಳು ಬಿದ್ದೊರಲಿತು (ಚ)
[159] ಮುನ್ನ ಜನ್ಮದ (ಗ)
[160] ಎನ್ನ ಬಿಡುವುದೆ ಎಂದಿತು (ಗ)
[161] ೧೪೭ನೆಯ ಪದ್ಯ ಚ. ದಲ್ಲಿಲ್ಲ. ಇಲ್ಲಿಂದ ಮುಂದಿನ ಪಾಠಾಂತರಗಳು :
ಕಂದನೀಗೆ ಬುದ್ಧಿ ಹೇಳಿ | ಬಂದಳಾಗ ಪುಣ್ಯಕೋಟಿಯು
ಚೆಂದದಿಂದ ಪುಣ್ಯನದಿಯೊಳು | ನಿಂದು ಸ್ನಾನವ ಮಾಡಿತು || (ಗ.ಚ)
ಗೋವು ಸ್ನಾನವ ಮಾಡಿಕೊಂಡು | ಗವಿಯ ಬಾಗಿಲ ಪೊಕ್ಕು ನಿಂತು
ಸಾವಕಾಶವ ಮಾಡದಂತೆ | ವ್ಯಾಘ್ರರಾಯನ ಕರೆದಳು || (ಗ)
.....ಕಂಡಳು (ಚ)

ದಿಂದಿಹರು ಲೋಕದಲಿ ಜೀವರು
ಎಂದು ಮನದೊಳಗರಿತು ದುಃಖವ
ನಿಂದೆ ತೊರೆಯುತ ಬಾಳಿರು  ||೧೪೮||

ಕಂದನನು ಸಂತೈಸಿ ತನ್ನಯ
ಬಂಧುವರ್ಗಕ್ಕೆಲ್ಲ ಮಣಿದು
ಒಡೆಯನಾಜ್ಞೆಯ ಪಡೆವೆನೆಂದು
ಒಡನೆ ಹೊರಟಳು ಭರದೊಳು  ||೧೪೯||

ಬಂದು ಒಡೆಯನ ಬಳಿಗೆ ಹರುಷದಿ
ಚಂದದಿಂದಲಿ ಕರವ ಮುಗಿದು
ನಿಂದು ವಾರ್ತೆಯನರುಹಿ ತೆರಳ್ವುದ
ಕೆಂದು ಅಪ್ಪಣೆ ಕೇಳ್ದಳು  ||೧೫೦||

ಕೇಳಿ ಮಾತನು ಪುಣ್ಯಕೋಟಿಯ
ಆಳಿದೊಡೆಯನು ಪರಮ ವಿಸ್ಮಯ
ತಾಳಿ ಮನದೊಳಗಭಯ ವಚನವ
ಪೇಳಿದನು ತಾ ಭರದೊಳು  ||೧೫೧||

ಬೆದರಬೇಡಲೆ ತಾಯೆ ವ್ಯಾಘ್ರಗೆ
ಮುದದಿ ಬಾಳಿರು ಕಂದನೊಂದಿಗೆ
ವಧಿಸಿ ಬರುವೆನು ದುಷ್ಟ ವ್ಯಾಘ್ರನ
ಒದಗಿನಲಿ ಪೋಗೀಕ್ಷಣ  ||೧೫೨||

ಎನುತ ಗರ್ಜಿಸಿ ಹಲ್ಲು ಕಡಿಯುತ

ಮನದಿ ರೋಷನ ತಾಳಿ ಕರದೊಳು
ಘನತರಾಸ್ತ್ರವ ತೆಗೆದುಕೊಳ್ಳಲು
ವಿನಯದಿಂದಲಿ ಸುರಭಿಯು ||೧೫೩||

ಪೇಳಿಕೊಂಡಳು ಅಗದಾಗದು
ಕೇಳು ಖಂಡಿತ ಬರುವೆನೆನುತಲಿ
ಖೂಳ ವ್ಯಾಘ್ರಗೆ ಘನದ ಭಾಷೆಯ
ಹೇಳಿ ಬಂದೆನು ಶೀಘ್ರದಿ ||೧೫೪||

ಕೊಟ್ಟ ಭಾಷೆಗೆ ತಪ್ಪಿನಡೆದು
ಭ್ರಷ್ಟಳೆನ್ನಿಸಿಕೊಂಡು ಜಗದೊಳು
ಕೆಟ್ಟ ನರಕವ ಸೇರಲಾರೆನು
ಶಿಷ್ಟ ಗುಣ ಸಂಪನ್ನನೆ ||೧೫೫||

ನಿನ್ನ ಚರಣಗಳಾಣೆ ವ್ಯಾಘ್ರಗೆ
ಎನ್ನ ಹರಣವನೊಪ್ಪಿಸಿರುವೆನು
ಎನ್ನ ನಂಬಿದ ವ್ಯಾಘ್ರನಿಗೆ ಕೇ
ಡನ್ನು ಬಗೆವುದು ಧರ್ಮವೆ ||೧೫೬||

ನಂದದಿಂದೆನಗಪ್ಪಣೆಯನು
ಇಂದು ಬೇಗದೊಳಿತ್ತು ಕಂದನ
ಚಂದದಿಂದಲಿ ಸಲಹುತಿರುವುದು
ಎಂದು ಬೇಡುವೆ ವಿನಯದಿ ||೧೫೭||

ನುಡಿದ ಮಾತನು ಕೇಳಿ ಪಶುವಿನ

ಒಡೆಯ ತಾನತಿ ದುಃಖ ಪಡುತಿರೆ
ಒಡನೆ ದುಃಖವ ಶಮನಪಡಿಸುತ
ಒಡೆಯನಪ್ಪಣೆ ಪಡೆದಳು ||೧೫೮||

ಬಳಿಕ ತಡೆಯದೆ ಭರದಿ ವ್ಯಾಘ್ರನ
ಬಳಿಗೆ ಹೋಗುವ ರಭಸ ಕಾಣುತ
ಬಳಿಯ ಜನರತಿ ಕಳವಳಿಸಿ ಮನ
ದೊಳಗೆ ಗೋಳಿಡುತಿರ್ದರು ||೧೫೯||

ಸರ್ವರನು ಸಂತೈಸಿ ಬೇಗದಿ
ಬಂದಳಾಗಲೆ ಪುಣ್ಯನದಿಗಳ
ಬಳಿಗೆ ಸ್ನಾನವ ಮಾಡಲೋಸುಗ
ಮನದಿ ಹರಿಯನು ಸ್ಮರಿಸುತ ||೧೬೦||

ಗಂಗೆ ಗೌತಮಿ ತುಂಗಭದ್ರೆಯು
ಸಿಂಗರದ ಕಾವೇರಿ ಯಮುನೆಯು
ಐದು ನದಿಗಳ ಸಂಗಮದಲಿ
ಮಿಂದು ಸ್ತುತಿಯನು ಗೈದಳು ||೧೬೧||

ಜಾಹ್ನವಿ ಜಗಜ್ಜನನಿ ತಾಯೇ
ಪುಣ್ಯಧಾನುಷ್ಕೋಟಿ ತಾಯೇ
ಮನ್ನಿಸೆನ್ನ ಮಲಾಪಹಾರಿಣಿ
ಇನ್ನು ತೀರ್ಥಗಳೆನ್ನನು ||೧೬೨||

ಇಂತು ಗಂಗಾಸ್ತುತಿಯ ಮಾಡಿ

ಅಂತರಾತ್ಮಕ ಕೃಷ್ಣನನ್ನು
ಅಂತರಂಗದಿ ಸ್ಮರಣೆಗೈಯುತ
ಚಿಂತೆ ಮರೆತು ನಡೆದಳು ||೧೬೩||

ದಾರಿಯಲಿ ತಡವಾಗದಂತೆ
ಭೋರನ್ಯೆದುತ ಗವಿಯ ಬಳಿಗೆ
ಸೇರಿ ಗವಿಯಾ ದ್ವಾರದಲ್ಲಿ
ವ್ಯಾಘ್ರರಾಯನ ಕರೆದಳು ||೧೬೪||

ಅಣ್ಣ ಬಾರೋ ಹುಲಿಯರಾಯನೆ
ಹಸಿದೆಯಲ್ಲೋ ದೋಷ ಬಂದಿತು
ಈಗ ನಿನ್ನಾಹಾರವನ್ನು
ಬೇಗ ತೆಗೆದುಕೊ ಬಾರಯ್ಯ[162] ||೧೬೫||

ಒಡನೆ ಬರುವೆನು ಎಂದೆ ನಿನ್ನೊಳು
ತಡವ ಮಾಡಿಯೆ ಬಂದೆ ನಾನು
ಮಾಡದಿರು ಎನ್ನೊಡನೆ ಕೋಪವ
ಸಿದ್ಧವಾಗಿಹೆನೀಗಲೆ ||೧೬೬||

ಖಂಡವಿದೆಕೋ ಮಾಂಸವಿದೆಕೋ
ಗುಂಡಿಗೆಯ ಬಿಸಿ ರಕುತವಿದೆಕೋ[163]

---

[162] ಎನ್ನ ಆಹಾರವನು ಬೇಗನೆ | ಕೊಳ್ಳಲೋ ಹುಲಿರಾಯನೆ (ಗ)
ಎನ್ನಯ ಆಹಾರವನು | ಬೇಗ ತೆಕ್ಕೋ ಬಾರಯ್ಯ (ಚ)
[163] ಗುಂಡಿಗೆಯ ಕೊಬ್ಬೊಗಳಿದಕೋ (ಗ) ಗುಂಡಿಗೆಯೊಳು ಕೊಬ್ಬು ಇದಕೋ (ಚ)
ಮಂಡಲದೊಳು (ಗ.ಚ)

ಉಂಡು ಸಂತಸಗೊಂಡು ನೀ ಭೂ
ಮಂಡಲದಿ ಬಾಳಯ್ಯನೇ ||೧೬೭||

ಎನ್ನ ಕಂದನ ನೋಡಿ ಬರುವರೆ
ಎನ್ನ ಕೃಪೆಯೊಳು ಮನೆಗೆ ಕಳುಹಿದಿ
ನಿನ್ನ ಉಪಕೃತಿಯನ್ನು ನಾನು
ಜನ್ಮ ಜನ್ಮದಿ ನೆನೆವೆನು ||೧೬೮||

ಸಿಟ್ಟು ಬೇಡವೊ ಎನ್ನ ಮೇಲೆ
ಕಷ್ಟ ದೆಸೆಯನ್ನೆಲ್ಲ ಮರೆತು
ಹೊಟ್ಟೆ ತುಂಬಾ ಉಂಡು ಸುಖದೊಳು
ನಟ್ಟಡವಿಯಲಿ ಬಾಳಯ್ಯ ||೧೬೯||

ಪುಣ್ಯಕೋಟಿಯ ಮಾತ ಲಾಲಿಸಿ
ತನ್ನೊಳಗೆ ವಿಸ್ಮಯವ ತಾಳುತ
ತನ್ನ ಗವಿಯನು ಹೊರಟು ಬಂದು
ಚೆನ್ನ ಯೋಚನೆ ಮಾಡಿತು ||೧೭೦||

ಧರೆಯೊಳಿಂಥಾ ಸತ್ಯವಂತೆಯ
ಮುರಿದು ತಿಂದರೆ ಘೋರ ನರಕವು
ಬರುವುದಿದು ನಿಶ್ಚಯವು ಎನ್ನನು
ನರಹರಿಯು ತಾ ಮೆಚ್ಚನು ||೧೭೧||[164]

[164] ೧೬೪ನೆಯ ಪದ್ಯದನಂತರದ ಗ. ಚ. ಪ್ರತಿಯ ಪದ್ಯಗಳು:-
ಪುಣ್ಯಕೋಟಿಯು ಬಂದು ನುಡಿಯೆ | ತನ್ನ ಮನದೊಳು ಹುಲಿಯರಾಯನು
ಕನ್ನೆಯಿವಳನು ಕೊಂದು ತಿಂದರೆ | ಎನ್ನ ನರಹರಿ ಮೆಚ್ಚನು || (ಗ)

ಇನಿತು ಯೋಚಿಸಿ ವ್ಯಾಘ್ರ ಗೋವಿಗೆ
ಮಣಿದು ಹೇಳಿತು ನಿನ್ನ ಹಾಗಿನ
ಸತ್ಯ ಸದ್ಗುಣ ಶೀಲೆಯರನೀ
ಪೃಥ್ವಿಯೊಳು ಕಂಡರಿಯೆನು ||೧೭೨||

ಅಣ್ಣನೆಂದೇ ಕರೆದೆಯೆನ್ನನು
ಇನ್ನು ಎನ್ನೊಡಹುಟ್ಟು ನೀನು
ನಿನ್ನ ತಿಂದರೆ ನರಕ ರೌರವ
ವನ್ನು ಸೇರುವೆ ಸಿದ್ಧವು ||೧೭೩||

ಪರಮ ಪಾವನೆ ಕೇಳು ನಿನ್ನಯ
ದರುಶನದಿ ಇಂದೆನ್ನ ಜನ್ಮವು
ಉರು ಪವಿತ್ರವು ಇನ್ನು ಬಾಳಿರ
ಲಾರೆ ಧರೆಯೊಳು ಸತ್ಯವು ||೧೭೪||

ಎಲೆ ಮಹಾತ್ಮಳೆ ಕೇಳು ನಿನ್ನಯ
ಚರಣ ಸನ್ನಿಧಿಯಲ್ಲಿ ಪ್ರಾಣವ
ತೊರೆದು ಪಡೆವೆನು ದಿವ್ಯ ಮುಕ್ತಿಯ

---

.........ಎನ್ನನಾ ಹರ ಮೆಚ್ಚನು | (ಚ)
ಎನ್ನ ಒಡಹುಟ್ಟಕ್ಕ ನೀನು | ನಿನ್ನ ತಿಂದು ನಾನೇನ ಪಡೆವೆನು
ನಿನ್ನ ಪಾದದ ಮೇಲೆ ಬಿದ್ದು | ಎನ್ನ ಪ್ರಾಣವ ಬಿಡುವೆನು || (ಗ)
ಅಕ್ಕಯೆನ್ನೊಡವುಟ್ಟು ನೀನು.......... ಬಿಡುವೆನು || (ಚ)
ಮುನ್ನ ನೂರು ಗೋವ ಕೊಂದ[೧] | ಅನ್ಯಕಾರಿ ಪಾಪಿ ನಾನು
ಇನ್ನು ಇರಿಸಲು ಏಕೆ[೨] ಪ್ರಾಣವ | ಬಿಡುವೆನೆಂದು ಹೇಳಿತು || (ಗ)
೧. ತಿಂದೆ (ಚ) ೨. ಬೇಕೆ (ಚ)

ಅಪ್ಪಣೆಯ ದಯಪಾಲಿಸು ||೧೭೫||

ವ್ಯಾಘ್ರರಾಯನ ಮಾತ ಕೇಳುತ
ತನ್ನ ಮನದೊಳು ಪುಣ್ಯಕೋಟಿಯು
ಪರಮ ವಿಸ್ಮಯಪಟ್ಟು ತಾನತಿ
ಕರುಣದಿಂದಲಿ ಪೇಳ್ದಳು ||೧೭೬||

ಅಣ್ಣ ಕೇಳೈ ವ್ಯಾಘ್ರರಾಯನೆ
ನಿನ್ನ ಹರಣವ ತೊರೆವುದನುಚಿತ
ಎನ್ನ ಮುದದೊಳು ತಿಂದು ಸುಖದಲಿ
ಬದುಕಿಕೊಂಡಿರು ಸುಖದಲಿ ||೧೭೭||

ಸುರಭಿ ಕೇಳೇ ಎನ್ನ ತಂಗಿಯೆ
ನೂರು ಗೋವನು ಮುನ್ನ ಕೊಂದಾ
ಘೋರದುರಿತವು ನಾಶವಾದುದು
ನಿನ್ನ ದರುಶನದಿಂದಲಿ ||೧೭೮||

ಪಾಪವಿರಹಿತನಾದ ನಾನು
ಈ ಪೊಡವಿಯಲಿ ಇನ್ನು ಬದುಕಿದೆ
ಪಾಪಿಯಾಗಿರೆ ಮರಳಿ ಖಂಡಿತ
ಜೀವಹತ್ಯೆಯ ಮಾಡುತ ||೧೭೯||

ಇನ್ನು ಎನಗಾಯುಷ್ಯವನ್ನು
ಎನ್ನ ತಂಗಿಯೇ ಕೋರದಿರು ನೀ
ನಿನ್ನ ಚರಣಗಳಾಣೆ ಪ್ರಾಣವ

ತೊರೆವೆ ನಾನೀ ಕ್ಷಣದೊಳು[165] ||೧೮೦||

ಹುಲಿಯ ದೃಢ ಸಂಕಲ್ಪವನ್ನು
ತಿಳಿದು ತಾನತಿ ದುಃಖಪಡುತಲಿ
ಹೇಳಿದಳು ಕೇಳಯ್ಯ ವ್ಯಾಘ್ರನೆ
ಎನ್ನ ಬಿನ್ನಪ ಕರುಣದಿ ||೧೮೧||

ಅಣ್ಣ ಕೇಳೈ ವ್ಯಾಘ್ರರಾಯನೆ
ನಿನ್ನ ಚರಣಗಳಾಣೆ ಖಂಡಿತ
ಎನ್ನ ಹರಣವನೊಪ್ಪಿಸಿರುವೆನು
ನಿನಗೆ ನಾನತಿ ಹರುಷದಿ ||೧೮೨||

ನಿನ್ನ ಪ್ರಾಣವ ತೊರೆಯಲೇತಕೆ
ಕನ್ನೆಯೆನ್ನನು ತಿಂದು ಬದುಕದೆ
ಮುನ್ನ ಹಸಿವೆಯ ಶಾಂತಪಡಿಸೈ[166]
ಪನ್ನಗಶಯಗೆ ಪ್ರೀಯವು ||೧೮೩||

ಪುಣ್ಯಕೋಟಿಯ ಮಾತ ಕೇಳಿ
ಕಣ್ಣಿನೊಳಗೆ ನೀರ ಸುರಿಸುತ

---

[165] ಗ. ಪ್ರತಿಯಲ್ಲಿ ಮಾತ್ರ ಇರುವ ಎರಡು ಪದ್ಯಗಳು :
ಅಮ್ಮ ನೀನು ಸತ್ಯವಂತೆಯು | ನಿನ್ನ ದರುಶನ ಮಾತ್ರದಿಂದಲಿ
ನಾನು ಪೂರ್ವದಿ ತಂದ ಫಲವು | ಇಂದು ಪರಿಹರವಾಯಿತು ||
ಯಾಕಯ್ಯ ಹುಲಿರಾಯ ಕೇಳು | ಜೋಕೆಯಿಂದಲಿ ಎನ್ನನೊಲ್ಲದೆ
ನೂಕಿ ನೀನು ಸಾಯಲೇತಕೆ | ಬೇಕೆಂದು ನಾ ಬಂದೆನು ||
[166] ಮುನ್ನ ನಿನ್ನಯ ತೃಷೆಯ ಸಲಹಿಕೊ (ಗ) ಇನ್ನು ನಿನ್ನಯ......(ಚ)

[167]ಮಣಿದು ಕರಗಳ ಮುಗಿದು ಗೋವಿಗೆ
ತಾನು ಬಿನ್ನಹಗೈದನು[167] ||೧೮೪||

ಇನ್ನು ಚಲವನು ಮಾಡೆನೆನ್ನಯ
ಪ್ರಾಣದಾಶೆಯ ತೊರೆದೆ ಮೋಕ್ಷವ
ಹರುಷದಿಂದೆನಗಿತ್ತು ಕಂದನ
ಸೇರಿ ಬಾಳಿರು ಸುಖದೊಳು ||೧೮೫||

ಎಂದು ಬಿನ್ನಹಗೈದು ಗೋವಿಗೆ
ಚಂದದಿಂದಲಿ ಚರಣಕೆರಗುತ
ನಿಂದು ಹರಿಯನು ಮನದಿ ಧ್ಯಾನಿಸಿ
ಬಂದು ಮಿಂದನು ನದಿಯೊಳು ||೧೮೬||

ಮಿಂದು ನದಿಯೊಳು ಹುಲಿಯು ಭರದೊಳು
ಬಂದು ಹಸುಗೆ ಪ್ರದಕ್ಷಿಣೆಯನು
ಚಂದದಿಂದಲಿ ತೆಗೆದು ಕರಗಳ
ಮುಗಿದು ಸ್ತೋತ್ರವ ಗೈದನು ||೧೮೭||

ಹಲವು ಬಗೆಯಲಿ ಸ್ತುತಿಸಿ ಗೋವನು
ಬೇಡಿಕೊಂಡಪರಾಧ ಕ್ಷಮೆಯನು
ಸಕಲ ದೇವರ್ಕಳನು ಮನದಲಿ
ಬಕುತಿಯಿಂದಲಿ ಸ್ಮರಿಸುತ ||೧೮೮||

---

[167] ಅನ್ಯಕಾರಿಯು ತಾನು ಎನುತಲಿ | ತನ್ನ ಮನದೊಳು ಧ್ಯಾನಿಸಿ (ಗ)
ಅನ್ಯಕಾರನು.......ಧ್ಯಾನಿಸಿ (ಚ)

ಮೂರು ಮೂರ್ತಿಗೆ ಕೈಯ ಮುಗಿದು
ಹಾರಿ ಆಕಾಶಕ್ಕೆ ತಲೆ ಕೆಳ
ಗಾಗಿ ಗೋವಿನ ಚರಣ ಬಳಿಯಲಿ
ಉರುಳಿ ಪ್ರಾಣವ ಬಿಟ್ಟಿತು ||೧೮೯||

ಭೂಮಿ ಭಾರವು ತಪ್ಪಿತೆಂದು
ಪ್ರೇಮದಿಂ ವನಲಕ್ಷ್ಮಿದೇವಿಯು
ಕಾಮಜನಕನ ಕೂಡೆ ಪೇಳ್ದಳು
ತಾಮಸವನು ಮಾಡದೆ ||೧೯೦||

ಹುಲಿಯರಾಯನು ಬಿದ್ದು ಪ್ರಾಣವು
ತೊಲಗಲಾಕ್ಷಣ ಪುಣ್ಯಕೋಟಿಯು
ಕೊಳುತ ಮೂರ್ಛೆಯ ಬೆದರಿ ಮನದೊಳು
ಹುಲಿಯ ಒತ್ತಿ ಬಿದ್ದಳು ||೧೯೧||

ಬಹ್ಮ ವಿಷ್ಣು ಮಹೇಶ್ವರರು ಗೋ
ವ್ಯಾಘ್ರಗಳ ವರ ಸತ್ಯಸದ್ಗುಣ
ಜ್ಞಾನ ಭಕ್ತಿಗೆ ಮೆಚ್ಚಿ ಪೊರಟರು
ಕಾಣಲವುಗಳ ಹರುಷದಿ ||೧೯೨||

ಸುರರು ಹೂಮಳೆ ಸುರಿಸುತಾಕ್ಷಣ
ಮೂರು ಮೂರ್ತಿಗಳೊಡನೆ ಪೊರಟರು
ವ್ಯಾಘ್ರ ಗೋವ್ಗಳ ಕಾಣುವಾತುರ
ದಿಂದಲಂದರುಣಾದ್ರಿಗೆ ||೧೯೩||

ತಂಡದಮರರ ಕೂಡಿ ಬರೆ ಮುಂ
ಕೊಂಡು ಗಿರಿಯಲಿ ಬಿದ್ದ ಮೃಗಗಳ
ಕಂಡು ತ್ರೈಮೂರ್ತಿಗಳು ವಿಸ್ಮಯ
ಗೊಂಡರಾಗಲೆ ಮನದೊಳು ||೧೯೪||

ಪರಮ ಕರುಣವ ತಾಳಿ ಮನದೊಳು
ಚರಣ ಸ್ಪರ್ಶದಿ ಹುಲಿಯ ಬದುಕಿಸಿ
ಮೂರ್ಛೆಯಿಂದಲಿ ಗೋವನೆಬ್ಬಿಸಿ
ಸುರರು ಹರುಷವ ತಳೆದರು ||೧೯೫||

ಕಂಡು ತ್ರೈಮೂರ್ತಿಗಳ ಹರುಷವ
ಕೊಂಡು ಮೃಗಗಳು ಭಕ್ತಿಯಿಂದಲಿ
ತಂಡವಾಗಿಯೆ ಕೈಮುಗಿದು ಬಲ
ಗೊಂಡು ಸ್ತುತಿಯನು ಗೈದವು ||೧೯೬||

ಒಡನೆ ವ್ಯಾಘ್ರನು ಬಿನ್ನವಿಸಿದನು
ಒಡೆಯ ಎನ್ನಯ ಘೋರ ದುರಿತವು
ಕಡಿದು ಹೋದುದು ಇಂದು ಗೋವಿನ
ಅಡಿಯ ದರುಶನದಿಂದಲಿ ||೧೯೭||

ಧರಣಿಯಲಿ ನಾನಿನ್ನು ಬದುಕಿರೆ
ತಿರುಗಿ ಪಾಪವನೆಸಗಿ ನರಕವ
ಸೇರುವದು ಖಂಡಿತವು ಎನ್ನುತ
ಅರಿತೆ ಎನ್ನಯ ಮನದೊಳು ||೧೯೮||

ಮುಂದೆ ಬಾಳಿರಲಾರೆ ಧರೆಯಲಿ
ಎಂದು ಗೋವಿನ ಚರಣ ಬಳಿಯಲಿ
ಇಂದು ಪ್ರಾಣವ ತೊರೆದೆ ನಿಮ್ಮಯ
ಸುಂದರಾಂಘ್ರಿಯ ಸ್ಮರಿಸುತ ||೧೯೯||

ಅಸುವ ಹರುಷದಿ ತ್ಯಜಿಸಿದವನಿಗೆ
ಅಸುವನೀಯಲುಬಹುದೆ ಸ್ವಾಮಿಯೆ
ಎಸೆವ ಮೋಕ್ಷವನೆನಗೆ ದಯೆಪಾ
ಲಿಸುವದೀಗಲೆ ಕೃಪೆಯೊಳು ||೨೦೦||

ಚರಣದರುಶನದಿಂದ ನಿಮ್ಮಯ
ಧರೆಯೊಳಗೆ ಬಲು ಧನ್ಯನಾದೆನು
ದುರಿತವೆಲ್ಲವು ತೊಲಗಿ ಜನ್ಮವು
ಪರಮ ಪಾವನವಾದುದು ||೨೦೧||

ಧರೆಯೊಳಗೆ ಕ್ಷಣವಿನ್ನು ನಾ ಬದು
ಕಿರೆನು ತನುವೊಪ್ಪಿಸಿದೆ ನಿಮ್ಮಯ
ಚರಣಕಮಲಕ್ಕೀಗ ಮುಕ್ತಿಗೆ
ಭರದೊಳಪ್ಪಣೆಯೀವುದು ||೨೦೨||

ಇಂತು ವ್ಯಾಘ್ರನು ನುಡಿಯೆ ತ್ರೈಮೂ
ರ್ತಿಗಳು ಹರುಷವ ತಾಳಿ ಮನದಲಿ
ಮುಕುತಿಗಪ್ಪಣೆಯೀಯಲಾ ಕ್ಷಣ
ಪ್ರಾಣ ತೊಲಗಿತು ವ್ಯಾಘ್ರನ ||೨೦೩||

ಮೆರೆವ ತ್ರೈಮೂರ್ತಿಗಳು ವ್ಯಾಘ್ರಗೆ
ಪರಮ ಹರ್ಷವ ತಾಳಲಾಕ್ಷಣ
ಸುರರು ವರದುಂದುಭಿಯ ಮೊಳಗುತ
ಅರಲ ಮಳೆಯನು ಕರೆದರು ||೨೦೪||

ಆಗ ಕರವನು ಮುಗಿದು ಪಶುವು
ಬಿನ್ನವಿಸಿದಳು ಎನ್ನ ಮಿತ್ರನು
ಅಳಿದು ನಾನುಳಿದೇನು ಫಲವು
ಎನಗು ಮೋಕ್ಷವನೀವುದು ||೨೦೫||

ಮೆಚ್ಚಿ ಪಶುವಿಗೆ ಹರುಷಪಟ್ಟರು
ಬ್ರಹ್ಮ ವಿಷ್ಣು ಮಹೇಶ್ವರರು ವರ
ದೇವ ದುಂದುಭಿ ಮೊಳಗುತಿರ್ದುದು
ಸುರರು ಹೂಮಳೆಗರೆದರು ||೨೦೬||

ಮೂರು ಮೂರ್ತಿಗಳೊಡನೆ ಗೋವಿನ
ಹರುಷದಿಂದಲಿ ಕರೆದು ತಮ್ಮಯ
ವರದ ಹಸ್ತದಿ ಮೈದಡವುತ
ಕ್ಕರೆಯೊಳಾಗಲೆ ಪೇಳ್ದರು ||೨೦೭||

ಸೃಷ್ಟಿಯೊಳಗತಿ ಶ್ರೇಷ್ಠ ಕೇಳೆ
ತುಷ್ಟರಾದೆವು ನಿನ್ನ ಸತ್ಯಕೆ
ಸಕಲ ಸದ್ಗುಣಶೀಲೆ ನೀನು
ಸುಖದಿ ಬಾಳಿರು ಧರೆಯಲಿ ||೨೦೮||

ಹಸಿದು ಗೋಳಿಡುತಿಹುದು ನಿನ್ನಯ
ಶಿಶುವು ದೊಡ್ಡಿಲಿ ಸಕಲ ಚಿಂತೆಯ
ತೊರೆದು ಹರುಷದಿ ಮನೆಗೆ ತೆರಳುತ
ಮೊಲೆಯನುಣ್ಣಿಸು ಬೇಗದಿ ||೨೦೯||

ಕಂದನೊಂದಿಗೆ ಚಂದದಿಂದಲಿ
ಬಂಧು ಬಳಗದ ಮಧ್ಯದೊಳಗಾ
ನಂದದಿಂದಲಿ ಬಾಳಿಕೊಂಡಿರು
ಸತ್ಯವಂತೆಯೆ ಧರೆಯಲಿ ||೨೧೦||

ಎಂದು ತ್ರೈಮೂರ್ತಿಗಳು ಹರಸುತ
ಚಂದದಿಂದಪ್ಪಣೆಯ ಕೊಡುತಲೆ
ಚರಣಕೆರಗುತ ಬೇಡಿ ಕೃಪೆಯನು
ಭರದಿ ಪೊರಟಳು ಮುದದೊಳು ||೨೧೧||

ಪರಮ ಹರುಷದಿ ಹುಲಿಯ ಪ್ರಾಣವ
ಹರಿಯು ಬ್ರಹ್ಮನು ಶಿರವ ಬೇಗದಿ
ತೆಗೆದುಕೊಂಡರು ಹರನು ಚರ್ಮವ
ಪೊದ್ದುಕೊಂಡನು ಭರದೊಳು ||೨೧೨||

ಆಸ್ಥಿಗಳಿನೆಲ್ಲಾಯುಧಂಗಳ
ಅರ್ಥಿಯಿಂದಲಿ ಮಾಡಿಕೊಂಡರು
ಮತ್ತೆ ಮಾಂಸದ ಖಂಡ ದಂಡೆಯ
ನೆತ್ತಿಕೊಂಡರು ಕೊರಲೊಳು ||೨೧೩||

ದೇವ ದುಂದುಭಿ ಮೊಳಗಿತಾಕ್ಷಣ
ಸರ್ವ ವಾದ್ಯದ ರಭಸವಾದುದು
ಸುರರು ಸರ್ವರು ಕುಸುಮವೃಷ್ಟಿಯ
ಹರುಷದಿಂದಲಿ ಸುರಿದರು ||೨೧೪||

ಕಾಮಧೇನುವ ಕರೆದು ಸರ್ವರ
ತೃಪ್ತಿ ಪಡಿಸೆಂದಾಜ್ಞೆಯೀಯಲು
ಇಷ್ಟ ಭೋಜನವಾಗಿ ಸರ್ವರು
ಶ್ರೇಷ್ಠ ಸಂತಸ ಬಟ್ಟರು ||೨೧೫||

ಮತ್ತೆ ತ್ರೈಮೂರ್ತಿಗಳು ಸುರರು ಸ
ಮೇತ ತಮ್ಮಯ ವಾಹನಂಗಳ
ನೇರಿ ಪೊರಟರು ತಮ್ಮ ನಗರಿಗೆ
ಪರಮ ಸಂಭ್ರಮದಿಂದಲಿ ||೨೧೬||

ಪುಣ್ಯಕೋಟಿಯು ಇತ್ತ ಚಿಣ್ಣನ
ತನ್ನೊಳಗೆ ನೆನೆಯುತ್ತ ದೊಡ್ಡಿಗೆ
ಬಂದು ಹರುಷದೊಳಪ್ಪಿ ತನ್ನಯ
ಕಂದನಿಗೆ ಮೊಲೆ ಕೊಟ್ಟಳು ||೨೧೭||

ಕರುವು ತಾಯನು ಕಂಡು ಮನದಲಿ
ಪರಮ ಹರುಷವ ತಾಳಿ ಪೇಳಿತು
ಬದುಕಿ ಬಂದೆಯ ತಾಯೆ ಎನ್ನಯ
ಮೊದಲ ಪುಣ್ಯದ ಫಲದಲಿ ||೨೧೮||

ಎಂದು ಪೇಳಲು ಕಣ್ಣಿನಿಂದಾ
ನಂದ ಬಾಷ್ಪವು ಸುರಿಯೆ ಕುವರಗೆ
ಅಂದು ಮುದ್ದೀಯುತ್ತ ವಾರ್ತೆಯ
ಚಂದದಿಂದಲಿ ಪೇಳ್ದಳು ||೨೧೯||

ಕಂದನಿಗೆ ಮೊಲೆಯುಣಿಸಿ ಬೇಗದಿ
ಬಂಧುಬಳಗದ ಬಳಿಗೆ ಬರಲಾ
ನಂದ ಪಟ್ಟವು ಸರ್ವ ಪಶುಗಳು
ಅಪ್ಪಿಕೊಂಡವು ಭರದೊಳು ||೨೨೦||

ಬಳಗವೆಲ್ಲವು ಕೂಡಿ ಕೇಳ್ದವು
ಹುಲಿಯ ಬಾಯೊಳಗಿಂದ ತಪ್ಪಿಸಿ
ಹೇಗೆ ಬಂದೆಯೆ ಪುಣ್ಯಕೋಟಿಯೆ
ಹೇಗೆ ನೀನತಿ ಶೀಘ್ರದಿ ||೨೨೦||

ಬಂದು ತ್ರೈಮೂರ್ತಿಗಳು ವ್ಯಾಘ್ರಗೆ
ಚಂದದಿಂದಲಿ ಮೋಕ್ಷವಿತ್ತತಿ
ಕರುಣದಿಂದಲಿ ಸಲಹಿ ದೊಡ್ಡಿಗೆ
ಭರದಿ ಕಳುಹಿದರೆನ್ನನು ||೨೨೨||

ಇಂತು ಹರುಷದಿ ಹಸುವು ನಿಜ ವೃ
ತ್ತಾಂತವೊರೆಯಲು ಕೇಳಿ ಪಶುಗಳ
ತಿಂತಿಣಿಯು ಬಹು ವಿಸ್ಮಯವನು
ಅಂತರಂಗದಿ ತಾಳಿತು ||೨೨೩||

ಪುಣ್ಯಕೋಟಿಯೆ ನಿನಗೆ ತ್ರೈಮೂ
ರ್ತಿಗಳ ದರುಶನವಾಯ್ತು ಧರೆಯಲಿ
ಏನು ಪುಣ್ಯವ ಪಡೆದು ಜನಿಸಿದೆ
ನಿನಗೆ ಸರಿಸಮರಿಲ್ಲವು ||೨೨೪||

ಪುಣ್ಯವಂತೆಯೇ ನಾವು ಸರ್ವರು
ಧನ್ಯರಾದೆವು ನಿನ್ನ ಕಂಡೀ
ಕ್ಷಿತಿಯೊಳೆನ್ನುತ ಹಸುಗಳೆಲ್ಲವು
ನುತಿಸಿದವು ಬಲು ಚೆಂದದಿ ||೨೨೫||

ಹಲವು ಪರಿಯಲಿ ಸ್ತುತಿಸಿ ಗೋವನು
ಬಳಸಿ ಚೆಂದದಿ ನಲಿದು ನೆಗೆಯುತ
ಜಲಜನಾಭ ಮುಕುಂದ ಕೇಶವ
ಒಲವ ತೋರೆಂದುಲಿದವು ||೨೨೬||

ಬಳಿಕ ತನ್ನಯ ಬಳಗದೊಡನೆ
ಸಲಹಿದೊಡೆಯನ ಬಳಿಗೆ ಬರಲು
ಕಂಡು ಗೋವನು ಪರಮ ಹರುಷವ
ಗೊಂಡು ಮನದೊಳು ಗೊಲ್ಲನು ||೨೨೭||

ಎದ್ದು ಭರದೊಳು ಬಂದು ಗೋವಿನ
ಪಾದಕೆರಗಿ ಪ್ರದಕ್ಷಿಣೆಯನು
ಗೈದು ಹರುಷದಿ ಕೇಳಿಕೊಂಡನು
ಬದುಕಿ ಬಂದಿಹ ಪರಿಯನು ||೨೨೮||

ಪೇಳೆ ವೃತ್ತಾಂತಗಳನೆಲ್ಲವ
ಕೇಳಿ ಮನದೊಳು ಪರಮ ವಿಸ್ಮಯ
ತಾಳಿ ಗೊಲ್ಲನು ಹಲವು ವಿಧದಿ ಸು
ಶೀಲೆ ಗೋವನು ಸ್ತುತಿಸಿದ ||೨೨೯||

ಪುಣ್ಯಕೋಟಿಯೆ ಧನ್ಯನಾದೆನು
ನಿನ್ನ ದರ್ಶನದಿಂದ ನಾನು
ಉನ್ನತದ ಸೌಭಾಗ್ಯವನು ಕಾ
ರುಣ್ಯದಿಂದಲಿ ಪಾಲಿಸು ||೨೩೦||

ಎನಲು ಗೊಲ್ಲನು ಪುಣ್ಯಕೋಟಿಯು
ನೀವು ಸರ್ವರು ವರುಷವರುಷದ
ಸಂಕರಾಂತಿಯ ಹಬ್ಬದಲಿ ಶ್ರೀ
ಚೆನ್ನ ಕೃಷ್ಣನ ಭಜಿಸುತ ||೨೩೧||

ಪಾಲ ಪೊಂಗಲನಿಕ್ಕಿಸಯ್ಯ
ಬಾಲಗೋವ್ಗಳ [168]ಕೂಡಿಸುತ ಗೋ
ಪಾಲಕೃಷ್ಣನು[168] ನಿಮಗೆ ಒಲಿವನು
ಪಾಲಿಸೆನ್ನಯ ವಾಕ್ಯವ ||೨೩೨||

ಎನಲು ಗೊಲ್ಲನು ನಮ್ಮ ವಂಶಕೆ
ವರುಷಕೊಂದಿನ ಸಂಕರಾಂತಿಯ
ಪರುವದಲ್ಲೀ ಪಾಲು ಪೊಂಗಲ
ವಿರಚಿಸುವೆನೆಂದೆನ್ನುತ ||೨೩೩||

---

[168] ಕೂಡಿ ಸಾಗಲು ಲೋಲಕೃಷ್ಣನು (ಗ), ನೆಲ್ಲ ಕೂಡಿಸಿ ಲೋಲಕೃಷ್ಣನು (ಚ)

ಬ್ರಹ್ಮ ವಿಷ್ಣು ಮಹೇಶ್ವರರು ಬಲು
ಹೆಮ್ಮೆ ಹರುಷವ ತಾಳುವಂತೆ
ಅತಿ ಮಹೋತ್ಸವದಿಂದ ಪೊಂಗಲ
ಹಬ್ಬವಾಗಲೆ ಮಾಡಿದ ||೨೩೪||

ಪರಮ ಹರುಷವ ತಾಳಿ ಮನದೊಳು
ನಿರುತ ತ್ರೈಮೂರ್ತಿಗಳ ಭಜಿಸುತ
ಬಕತಿಯಿಂದಲಿ ಸಕಲ ಪಶುಗಳು
ಸುಖದಿ ಬಾಳಿರುತಿರ್ದವು ||೨೩೫||

ಪ್ರಾಸ ವರ್ಣಗಳೊಳಗೆ ಬಲು ವ್ಯ
ತ್ಯಾಸವಿರುವುದು ಎನುತ ಮನದಲಿ
ಬೇಸರದೆ ಕ್ಷಮಿಸುವದು ಕೃಪೆಯಲಿ
ವಾಸುದೇವನ ಭಕ್ತರು ||೨೩೬||

ಧರೆಯೊಳಗೆ ಈ ಪುಣ್ಯ ಚರಿತೆಯ
ಪರಮ ಭಕ್ತಿಯೊಳೋದಿ ಕೇಳಲು
ಪೊರೆವ ಶ್ರೀ ನರಹರಿಯು ಕರುಣದಿ
ಭರಿತ ಸಂಪದವೀಯುತ ||೨೩೭||

* ೧೬೬ನೆಯ ಪದ್ಯದನಂತರ ಕೊನೆಯವರೆಗಿನ ಗ.ಚ.ದ. ಪಾಠಾಂತರ :

ಹರಿಯು ಮೆಚ್ಚಿದ ಹರನು ಮೆಚ್ಚಿದ | ಬ್ರಹ್ಮದೇವನು ತಾನು[169] ಮೆಚ್ಚಿದ
ಸುರರು ಹೂಮಳೆಗರೆದು ಬೇಗದಿ[170] | ಕರುಣದಿಂದಲಿ ಇರುವರು || (ಗ)

ಬ್ರಹ್ಮಪ್ರಾಣವ ಕರೆದುಕೊಂಡ | ಹರನು ಪುಲಿಯ ಚರ್ಮ ಪೊದ್ದನು
ಹರಿಯು ಹಸುವನು ಮನ್ನಿಸಿಯೆ | ತಿರುಗಿ ಕಳುಹಿದ ದೊಡ್ಡಿಗೆ || (ಗ)

-ಇದು ಚ.ದಲ್ಲಿಲ್ಲ

ಅಲ್ಲಿಂದ ಕಳುಹೀಸಿಕೊಂಡು | ಮೆಲ್ಲನೆ ದೊಡ್ಡಿಗೆ ಬಂದು
ಆಗ ತನ್ನ ಬಳಗವೆಲ್ಲ | ಬೇಗ ಸಂತಸಗೊಂಡವು || (ಚ) -ಇದು ಗ.ದಲ್ಲಿಲ್ಲ

ಆಗ ತಮ್ಮ ಬಳಗವೆಲ್ಲ | ಬೇಗದಿಂ ಸಂತೋಷಗೊಂಡು
ಹೇಗೆ ಬಂದೆಯೇ ಪುಣ್ಯಕೋಟಿಯೆ | ಈಗ ನೀನತಿ ಶೀಘ್ರದಿ || (ಗ) -ಇದು ಚ.ದಲ್ಲಿಲ್ಲ.

ಕೇಳಿರಕ್ಕಾ ತಂಗಿಗಳಿರ | ಎನ್ನ ತಾಯೊಡಹುಟ್ಟುಗಳಿರ
ಹೇಳುವೆನು ಎನ್ನಿಷ್ಟ ದೇವನು | ಇಳೆಯೊಳ್ ಶ್ರೀ ಕೃಷ್ಣ ಸಲಹಿದ || (ಚ) -ಇದು ಗ.ದಲ್ಲಿಲ್ಲ.

ಹುಲಿಗೆ ಮೋಕ್ಷನ ಕೊಟ್ಟು ಶಿವನು | ಸಲಹಿ ಎನ್ನನು ಬಿಡಿಸಿದಾನು
ನಲಿದು ಬಂದೆನು ಮರಳಿ ದೊಡ್ಡಿಗೆ | ಗೆಲುವಿನಿಂದಲಿ ಈಗಲು || (ಗ.ಚ)

ಎಂದ ವಾಕ್ಯನ ಕೇಳಿ ಪಶುಗಳು | ಚಂದದಿಂದಾ ನಲಿದು ನೆಗೆಯುತ
ಇಂದುಧರ ಅರವಿಂದ ನಾಭ ಗೋ | ವಿಂದ ಎನುತಲಿ ನಲಿದವು || (ಗ.ಚ)

---

169 ಮೊದಲೆ (ಚ)

170 ಸುರರು ಮೆಚ್ಚಿ ಪೂಮಳೆಯ ಕರೆದರು (ಚ)

ಗೊಲ್ಲಗೌಡನು ತಾನು ಬಂದು | ಪುಣ್ಯಕೋಟಿಯ ಪಾದಕೆರಗಿ
ಉನ್ನತದ ಸೌಭಾಗ್ಯವೀಯೆಂದು | ಚೆನ್ನಾಗಿ ತಾ ಕೇಳಿದ || (ಗ.ಚ)

ಪುಣ್ಯಕೋಟಿಯು ನಲಿದು ಕರುವಿಗೆ | [171]ಪುಣ್ಯಕಾರಿ ಎನುತ ಬೇಗದಿ
ಚೆನ್ನಗೌಡನ ಕಂಡು ತಾನು | ಉನ್ನತಾದಿಂದೆಂದಿತು[171] || (ಗ)

ಎನ್ನವಂಶದ ಗೋವ್ಗಳೊಳಗೆ | ನಿನ್ನವಂಶದ ಗೊಲ್ಲರೊಳಗೆ
ಮುನ್ನಸಂಕ್ರಾಂತಿ[172] ಹಬ್ಬದೊಳಗೆ | ಚೆನ್ನ ಕೃಷ್ಣನ ಭಜಿಸಿಯೆ || (ಗ) -ಇದು ಚ. ದಲ್ಲಿಲ್ಲ.

ಪಾಲುಪೊಂಗಲನಿಕ್ಕಿಸಯ್ಯ | ಬಾಲ ಗೋವ್ಗಳ ಕೂಡಿ ಸಾಗಲು
ಲೋಲಕೃಷ್ಣನು ನಿಮಗೆ ಒಲಿವನು | ಪಾಲಿಸೆನ್ನಯ ವಾಕ್ಯವ ||

ಪುಣ್ಯಕೋಟಿಯ ಮಾತ ಕೇಳಿ | ಗೊಲ್ಲಗೌಡನು ತಾನು ಬೇಗದಿ
ಪುಣ್ಯನದಿಯೊಳು ಮಿಂದು ಬಂದು | ಆಗ ಹಬ್ಬವ ಮಾಡಿದ || (ಗ) -ಇದು ಚ. ದಲ್ಲಿಲ್ಲ.

ನಮ್ಮವಂಶಕೆ ವರುಷಕೊಂದು | ಸಂಕರಾತ್ರಿಯ ಹಬ್ಬದೊಳಗೆ |
ಪಾಲು ಪೊಂಗಲ ಮಾಳ್ಪೆವೆಂದು | ಆಗ ಹಬ್ಬನ ಮಾಡಿದ || (ಗ)

ಗೋವು ಹೇಳಿದ ಪುಣ್ಯಕಥೆಗಳ | ಹೇಳಿದವರಿಗೆ ಕೇಳಿದವರಿಗೆ
ಈವ ಅಚ್ಯುತ ಸೌಭಾಗ್ಯಸಂಪದ | ಆವ ಕಾಲಕೆ ತೆಗೆಯದ || (ಗ.ಚ)

---

[171] ಉಣ್ಣಿಸುತಲಾ ಮೊಲೆಯ ಬೇಗದಿ
ಚೆನ್ನಗೊಲ್ಲನ ಕೂಡಿ ತಾನು | ಉನ್ನತದಿಂದಿರ್ದಿತು || (ಚ)
[172] ಶಂಕರಾತ್ರಿ ಹಬ್ಬದಲ್ಲಿ (ಚ)

ಪದ್ಮನಾಭನೆ ಪರಂಧಾಮನೆ || ಮುದ್ದುರ[173] ಶ್ರೀ ನಾರಸಿಂಹನೆ
ಮುದ್ದು ವರಗಳ ಕೊಡುವ [174]ನಿಮಗೆಯು | ನಮೋ ನಮೋ ಮಂಗಳಂ[174] || (ಗ)

ಗೋವಿನ ಕತೆ ಹಾಡು ಸಂಪೂರ್ಣ.

[173] ಮಧುರಾ (ಚ)

[174] ದೇವನೆ ಧರೆಯೊಳಗೆ ನಮೋ ನಮೋ ಎಂದನು (ಚ)

# ಗೋವಿನ ಕತೆಯ ಇತರ ಉಪಲಬ್ಧ ಕೃತಿಗಳು

**ಸಂಸ್ಕೃತದಲ್ಲಿ**

1. ಬಹುಲೋಪಾಖ್ಯಾನ 'ಇತಿಹಾಸ ಸಮುಚ್ಚಯ' (ವ್ಯಾಸ ಪ್ರಣೀತ) ಅಧ್ಯಾಯ 70, ಭೀಷ್ಮನು ಯುಧಿಷ್ಠಿರನಿಗೆ ಹೇಳುವುದು, ಶ್ಲೋಕಗಳು 247.

2. ಗೋವ್ಯಾಘ್ರೀ ಸಂವಾದ-ಅನುಶಾಸನ ಪರ್ವದ ಪರಿಶಿಷ್ಟ, ಭೀಷ್ಮನು ಯುಧಿಷ್ಠಿರನಿಗೆ ಹೇಳುವುದು. ಶ್ಲೋಕ ಪಂಕ್ತಿಗಳು 460

3. ಪದ್ಮಪುರಾಣ (ವ್ಯಾಸಮಹರ್ಷಿ ಪ್ರಣೀತ) ಸೃಷ್ಟಿ ಖಂಡ, ಭಾಗ 2, ನಂದೋಪಾಖ್ಯಾನ ಅಧ್ಯಾಯ 18. ಪುಲಸ್ತ್ಯನು ಭೀಷ್ಮನಿಗೆ ಹೇಳುವುದು. ಶ್ಲೋಕಗಳು 204

**ಕನ್ನಡದಲ್ಲಿ**

4. ಗೋವಿನ ಕಥೆ-ವಿಭೀಷಣ ಬುದ್ಧಿ (1921)ಶಾರದಾ ವಿಲಾಸ ಪ್ರೆಸ್, ಬೆಂಗಳೂರು.

5. ಕಾಮಧೇನು ಎನ್ನುವ ಗೋವಿನ ಕಥೆ(1923)ವಿದ್ವಾನ್ ಬಾಲ ಸರಸ್ವತಿ ಕೃತ.

6. ಸಚಿತ್ರ ಗೋವಿನ ಕಥೆ-ವಿಭೀಷಣ ಬುದ್ಧಿ (1924) ತಿದ್ದಿದ ಹೊಸಮುದ್ರಣ.

7. ಯಕ್ಷಗಾನ ಗೋವು ಚರಿತ್ರೆ-(1895)ಗುಬ್ಬಿ ವಿ.ಪ. ಗುರುಸಿದ್ದಪ್ಪ ವಿರಚಿತ.

8. ಗೋವಿನ ಕಥೆ ಹಾಡು (ಗೋಸಾವಿತ್ರೀ ಸ್ತೋತ್ರ ಸಹಿತ) ಐದನೆ ಅಚ್ಚು (1950) ಶ್ರೀ ಕೃಷ್ಣ ಮುದ್ರಣಾಲಯ ಉಡುಪಿ.

9. ಗೋವಿನ ಹಾಡು - (1960) ಸಂ: ಡಿ. ಎಲ್. ನರಸಿಂಹಾಚಾರ್, ಶಾರದಾ ಮಂದಿರ, ಮೈಸೂರು.

10. ಆಕಳ ಹಾಡು-"ಮಲ್ಲಿಗೆ ದಂಡೆ" (1935) ಎಂಬ ಜನಪದ ಗೀತ ಸಂಗ್ರಹದಲ್ಲಿ

11. ಕವುಲಿ ಹಾಡು-ಹಾಡಿನ ಚೂಡಾಮಣಿ (1971) ಎಂಬ ದ.ಕ. ಜಿಲ್ಲೆಯ ಜನಪದ ಗೀತ ಸಂಗ್ರಹದಲ್ಲಿ, ಸಂ.ಟಿ. ಕೇಶವ ಭಟ್ಟ.

12. ಕೌಲೆ ಹಾಡು-ಶ್ರೀ ಕ. ರಾ. ಕೃ. ಅವರ ಅಪ್ರಕಟಿತ ಸಂಗ್ರಹದಲ್ಲಿ.

13. ಗೋವಿನ ಹಾಡು - (1972) ಕನ್ನಡ ಸಾಹಿತ್ಯ ಪರಿಷತ್ತಿನ ಪ್ರಕಟನೆ.

**ಲೇಖನಗಳು**

1. ಪು. ತಿ. ನರಸಿಂಹಾಚಾರ್-The story of Punyakoti and Tiger Arbutha - Prof. M. Hiriyanna commemoration volume (1951).
2. ಮಾಸ್ತಿ ವೆಂಕಟೇಶ ಅಯ್ಯಂಗಾರ್- ಕರ್ಣಾಟಕ ಜನತೆಯ ಸಂಸ್ಕೃತಿ (1951 ಪುಟ 48).
3. ಪ. ನಾಗರಾಜಯ್ಯ 'ಗೋವಿನ ಹಾಡು' ಕನ್ನಡನುಡಿ, ಏಪ್ರಿಲ್ 1961.
4. ಎಸ್. ವಿ. ಪರಮೇಶ್ವರ ಭಟ್ಟ–"ಗೋವಿನ ಹಾಡು"-ಹೊನ್ನಬಿತ್ತೇವು ಹೊಲಕೆಲ್ಲ(1967) ಮತ್ತು ಲೇಖನಗಳು (1971) ಇವುಗಳಲ್ಲಿ.
5. ಟಿ. ಕೇಶವ ಭಟ್ಟ- "ಗೋವಿನ ಕತೆ ಹಾಡು" ಎಂಬ ಅಧ್ಯಾಯ ದ.ಕ. ಜಿಲ್ಲೆಯ ಜನಪದ ಗೀತೆಗಳು ಎಂಬ ಸಂಶೋಧ ಗ್ರಂಥದಲ್ಲಿ 1996 (ಕ. ಸಾ. ಪ.)

ಸತ್ಯೇನ ಧಾರ್ಯತೇ ಪೃಥ್ವೀ ಸತ್ಯೇನ ತಪತೇ ರವಿಃ
ಸತ್ಯೇನ ವಾಯವೋ ವಾಂತಿ ಸರ್ವಂ ಸತ್ಯೇ ಪ್ರತಿಷ್ಠಿತಂ ॥



ಪ್ರೊ॥ ಟಿ. ಕೇಶವ ಭಟ್ಟ

## ಈ ಗೋವಿನ ಕತೆ ಹಾಡು

ಸತ್ಯ, ಅಹಿಂಸೆ, ತ್ಯಾಗ, ವಾತ್ಸಲ್ಯ, ಗೋರಕ್ಷಣೆ
ಎಂಬ ರಾಷ್ಟ್ರೀಯ ಪಂಚಶೀಲಗಳ ಪದ್ಯ ಕಥೆ-
ಜನಪ್ರಿಯ ಬಾಲ ಸಾಹಿತ್ಯ ಕೃತಿ.
(ಶಾಸ್ತ್ರೀಯವಾಗಿ ಸಂಪಾದಿತ)

ಅಗಾಧೇ ವಿಮಲೇ ಶುದ್ಧೇ ಸತ್ಯತೋಯೇ ಶುಚಿಹ್ರದೇ
ಸ್ನಾತವ್ಯಂ ಮಾನಸೇ ತೀರ್ಥೇ ಸ್ನಾನಂ ತತ್ಪರಮಂ ಸ್ಮೃತಂ॥

ವಾಚೋ ವಿಚಲಿತಾ ಯಸ್ಯ ಸುಕೃತಂ ತೇನ ಹಾರಿತಂ
ಮೇದಿನೀ ತಸ್ಯ ಪಾಪೇನ ಕಂಪತಿಸ್ಮ ಮುಹುರ್ಮುಹುಃ ॥